# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಏನೋ ಒಂದು ಕೆಲಸ ಮಾಡುವವರಿಗೆ ಹಸಿವೆಯಾಗುತ್ತಾ ಇರುತ್ತದೆ. ಅಂದರೆ ಆರೋಗ್ಯ ಸರಿಯಾಗಿದೆ ಎಂದು ಅರ್ಥ. ಸೋಮಾರಿಗಳಾಗಿರುವವರಿಗೆ ಹಸಿವೆ ಕಡಿಮೆ, ಅಜೀರ್ಣ ಜಾಸ್ತಿ. ಅಂಥವರಿಗೆ ಜಿಹ್ವಾ ಚಾಪಲ್ಯ ಹೆಚ್ಚಾಗಿರುತ್ತದೆ. ರುಚಿಗಾಗಿ ಅದೂ ಇದೂ ತಿನ್ನುತ್ತಾ ಯಾವಾಗಲೂ ಏನೋ ರೋಗದಿಂದ ಬಳಲುತ್ತಾರೆ. ಆರೋಗ್ಯ ಸರಿಯಾಗಿರಲಿಕ್ಕೂ, ಫಲಿತವು ಸಾರ್ಥಕವಾಗಲಿಕ್ಕೂ ಶ್ರಮಪಡುವುದೇ ಮುಖ್ಯ. ಶ್ರಮವಿಲ್ಲದೆ ಸುಲಭ ಸಂಪಾದನೆಯ ಮಾರ್ಗ ಒಳ್ಳೆಯದಲ್ಲವೆಂಬುದು ಈ ಸಂಚಿಕೆಯ "ಬೇಸಾಯ ಬಂಗಾರ" ಎಂಬ ಕಥೆ ನಿರೂಪಿಸುತ್ತದೆ.

## ಅಮರವಾಣಿ

ಉಪೇಕ್ಷ್ಯ ಸಮಯೇ ಕಾರ್ಯೇ ಭಗ್ನೇ ಚಿಂತಾ ನಿರರ್ಥಕಾ
ನಿರ್ಗತೇ ಸಲಿಲೇ ತಂತ್ರ ಸೇತು ಬಂಧೋ ನಿರರ್ಥಕಃ

ಮಾಡತಕ್ಕ ಕೆಲಸ ತಕ್ಕ ಸಮಯದಲ್ಲಿ ಮಾಡದೆ, ಆಮೇಲೆ ಕೆಟ್ಟಿತೆಂದು ಚಿಂತಿಸಿ ಫಲವಿಲ್ಲ. ನೀರಿರುವಾಗಲೇ ಕಟ್ಟೆ ಕಟ್ಟದೆ, ಬತ್ತಿಹೋದ ಮೇಲೆ ಕಟ್ಟೆ ಕಟ್ಟಿ ಲಾಭವಿಲ್ಲ.

ಸಂಪುಟ : ೭೨ ಜೂನ್ '೮೪ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ




## ರಕ್ಕಸ ಹಲ್ಲಿಗಳು ನಾಶವಾದುವೇಕೆ ?

ಸುಮಾರು ಆರೂವರೆ ಕೋಟಿ ವರ್ಷಗಳ ಹಿಂದೆ ಭೂಗೋಳದಲ್ಲೆಲ್ಲಾ ವ್ಯಾಪಿಸಿಕೊಂಡಿದ್ದ 'ಡಿನೋ ಸಾರ್ಸ್' ಎಂಬ ರಕ್ಕಸ ಹಲ್ಲಿಗಳು ಇದ್ದಕ್ಕಿದ್ದ ಹಾಗೆ ಹೇಗೆ ಅದೃಶ್ಯವಾದುವು? ಅಂತರಿಕ್ಷದಿಂದ ಬಂದ ಸಣ್ಣದೊಂದು ಗ್ರಹವು ಭೂಗೋಳಕ್ಕೆ ಢೀ ಹೊಡೆದು ಪ್ರಳಯವನ್ನು ಸೃಷ್ಟಿಸಿತೆಂದೂ, ಆ ಪ್ರಳಯದಲ್ಲೇ ರಕ್ಕಸ ಹಲ್ಲಿಗಳು ಒಮ್ಮೆಗೇ ಸಮೂಲ ನಾಶ ಹೊಂದಿರ ಬೇಕೆಂದೂ ವಿಜ್ಞಾನವೇತ್ತರು ನಂಬುತ್ತಾರೆ.

## ಮಾನವ ಮತ್ತು ಮೃಗ

ಕ್ರಿ. ಪೂ. ಆರು ಸಾವಿರ ವರ್ಷಗಳ ಹಿಂದೆಯೇ ಮಾನವನು ಪ್ರಾಣಿಗಳನ್ನು ತನ್ನ ಕೈ ಕೆಳಗೆ ತಂದುಕೊಳ್ಳಬಲ್ಲವನಾದನೆಂದು ಇದುವರೆಗೆ ನಮ್ಮ ಚರಿತ್ರಕಾರರು ಹೇಳುತ್ತಾ ಬಂದರು. ಆದರೆ ಲಂಡನ್ ವಿಶ್ವವಿದ್ಯಾಲಯಕ್ಕೆ ಸೇರಿದ ಪಾಲ್ ಬಾನ್ ಎಂಬ ಪುರಾತತ್ವ ವಸ್ತು ಸಂಶೋಧನ ಶಾಸ್ತ್ರಜ್ಞನು, ಸುಮಾರು ಲಕ್ಷ ವರ್ಷಗಳ ಹಿಂದೆಯೇ ಮನುಷ್ಯನು ಪ್ರಾಣಿಗಳನ್ನು, ಮುಖ್ಯವಾಗಿ ಕುದುರೆಗಳನ್ನು ಪಳಗಿಸಿಕೊಳ್ಳಲು ಕಲಿತಿದ್ದಾನೆಂದು ಇತ್ತೀಚೆಗೆ ತನ್ನ ಸಂಶೋಧನೆಗಳ ಮೂಲಕ ಕಂಡುಹಿಡಿದನು.





## ಆಕಾಶದಲ್ಲಿ ಸ್ವಸ್ತಿಕ ಚಿಹ್ನೆ

ಸಾವಿರಾರು ವರ್ಷಗಳಿಂದಲೇ ಸ್ವಸ್ತಿಕ ಚಿಹ್ನೆ ಹಿಂದುಗಳಿಗೆ ಪವಿತ್ರ ಚಿಹ್ನೆಯಾಗಿದೆ. ಪುರಾತನ ಗ್ರೀಕ್ ದೇಶದವರೂ, ಮಧ್ಯ ಯುಗಗಳಲ್ಲಿ ಕ್ರೈಸ್ತರೂ ಇದನ್ನು ಪವಿತ್ರವಾಗಿ ಭಾವಿಸಿದರು. ಬಹಳ ಕಾಲದ ಹಿಂದೆ, ಬಾಲದ ನಕ್ಷತ್ರದ ಬೆಳಕಿನ ಕಿರಣಗಳು, ಭೂಗೋಳದ ಅಯಸ್ಕಾಂತ ಕ್ಷೇತ್ರದಿಂದಾಗಿ ಹೋದಾಗ ಆಕಾಶದಲ್ಲಿ ಸಸ್ತಿಕಾಕಾರವು ಕಾಣಿಸಿರ ಬಹುದೆಂದು ಟೆಕ್ಸಾಸ್‌ಗೆ ಸೇರಿದ ಸಿ. ಜೆ. ರಾನ್ಸಮ್. ಹಾನ್ಸ್ ಸ್ಕ್ಯಾಟರ್ ಅಭಿಪ್ರಾಯಪಡುತ್ತಾರೆ.

## ನಿಮಗೆ ಗೊತ್ತೇ?

೧. 'ಅಭಿಜ್ಞಾನ ಶಾಕುಂತಲಂ' ಎಂಬ ಸಂಸ್ಕೃತ ನಾಟಕವನ್ನು ರಚಿಸಿದವರು ಯಾರು?

೨. ಇಲಿಯಡ್ ಒಡಿಸ್ಸೀ ಎಂಬ ಗ್ರೀಕು ಕಾವ್ಯಗಳನ್ನು ರಚಿಸಿದುದು ಯಾರು?

೩. 'ಪೇರಡೈಜ್ ಲಾಸ್ಟ್' ಎಂಬ ಆಂಗ್ಲ ಕಾವ್ಯ ರಚಿಸಿದ ಕವಿ ಯಾರು ?

೪. ಅರ್ಥಶಾಸ್ತ್ರವನ್ನು ರಚಿಸಿದವರು ಯಾರು?

೫. ಸಾಹಿತ್ಯಕ್ಕಾಗಿ ನೋಬೆಲ್ ಬಹುಮಾನ ಪಡೆದ ಬ್ರಿಟಿಷ್ ಪ್ರಧಾನ ಮಂತ್ರಿ ಯಾರೆಂದು ನಿಮಗೆ ಗೊತ್ತೇ?

(ಉತ್ತರ ೬೪ ನೇ ಪುಟದಲ್ಲಿ)




ಒಂದಾನೊಂದು ಊರಿನಲ್ಲಿ ರಂಗನೆಂಬೊಬ್ಬ ರೈತ ನಿದ್ದ. ಅವನಿಗೆ ತಂದೆತಾಯಿಗಳು ಬಿಟ್ಟು ಹೋದ ನಾಲ್ಕು ಎಕರೆಗಳಷ್ಟು ಹೊಲವೇನೋ ಇದ್ದಿತು. ಅದನ್ನು ರಂಗನು ದುಡಿಯುವ ಒಕ್ಕಲುಗಳಿಗೆ ಗೇಣಿಗೆ ಕೊಟ್ಟು, ಬರುವ ಗೇಣಿಧಾನ್ಯಗಳಿಂದ ಜೀವನ ಸಾಗಿಸಿ ಕೊಂಡಿದ್ದ.

ಇದಕ್ಕೆ ಕಾರಣವೇನೆಂದರೆ ರಂಗನು ದೊಡ್ಡ ಮೈಗಳ್ಳ. ಕಷ್ಟಪಟ್ಟು ದುಡಿಯಲು ಉದಾಸೀನ. ಅವನ ಹೆಂಡತಿ ಮಾತ್ರ, "ಬೇಸಾಯದ ಕಷ್ಟ ಬೇಡದಿದ್ದರೆ ಹೋಗಲಿ, ಕುಳಿತಲ್ಲೇ ಏನಾದರೂ ವ್ಯಾಪಾರವಾದರೂ ಮಾಡಬಾರದೆ ?" ಎಂದು ಗಂಡನನ್ನು ಆಗಾಗ ತಿವಿಯುತ್ತಾ ಇರುವಳು.

"ನಮಗೇನು ಕಡಿಮೆಯಾಗಿದೆಯೆಂದು ? ನಿಶ್ಚಿಂತೆಯಿಂದಲೇ ತಿಂದುಂಡುಕೊಂಡಿದ್ದೇವಷ್ಟೆ ?" ಎನ್ನುವನು ರಂಗ.

"ಸುಖವೆಂದರೆ ಸುಮ್ಮನೆ ಕೂತು ತಿನ್ನುವುದೇನಾ ? ನನಗೊಂದು ಚಿನ್ನದ ಸರ, ಒಡ್ಯಾಣ ಮಾಡಿಸುವೆ ನೆಂದು ಎಂದಿನಿಂದಲೋ ಹೇಳ್ತಾನೇ ಇದ್ದೀರಲ್ಲ ? ಮಾಡಿಸಲಿಕ್ಕಾಯಿತೆ ? ಎದುರು ನೋಡಿ ನೋಡಿ ಸಾಕಾಯಿತು. ಈಗಿನ ಆದಾಯ ನೋಡಿದರೆ, ಈ ಜನ್ಮದಲ್ಲಿ ನನಗೆ ಆ ಭಾಗ್ಯ ಬರಲಿಕ್ಕೇ ಇಲ್ಲಾ ಅನಿಸುತ್ತೆ. ನನ್ನ ಹಣೆ ಬರೆಹ ಇಷ್ಟೇ" ಎನುತ್ತಿದ್ದಳು ಹೆಂಡತಿ.

ಹೆಂಡತಿಗೆ ಚಿನ್ನದ ಸರವನ್ನೂ, ಒಡ್ಯಾಣವನ್ನೂ ಮಾಡಿಸಬೇಕೆಂದು ರಂಗನಿಗೆ ಕೂಡಾ ಆಶೆ ಏನೋ ಇದ್ದಿತು. ಆಗ ನೆರೆಕರೆಯವರ ಮುಂದೆ ತನ್ನ ಪ್ರಭಾವ ಹೆಚ್ಚುತ್ತದೆ. ಆದರೆ ಬರುವ ಆದಾಯ ಆಗಿಂದಾಗ ಸಾಕೂ ಸಾಲದ ಹಾಗೆ ಮುಗಿದು ಹೋಗುತ್ತದೆ. ಸ್ವಲ್ಪಾದರೂ ಉಳಿತಾಯಕ್ಕೆ ಸಾಧ್ಯ ವಾದರೆ ತಾನೇ ?

ಹಣವನ್ನು ಹೇಗೆ ಸಂಪಾದಿಸಬೇಕು ? ಎಂಬ ಈ ಪ್ರಶ್ನೆಯನ್ನು ಒಂದು ದಿನ ತನ್ನ ಒಬ್ಬ ಗೆಳೆ ಯನ ಮುಂದೆ ತೆಗೆದನು. ಅದಕ್ಕೆ ಆ ಸ್ನೇಹಿತನು ಬೇರೆ ಬೇರೆ ಸಲಹೆಗಳನ್ನು ಹೇಳಿದನು. ಅದಾವುದೂ ರಂಗನಿಗೆ ಹಿಡಿಸಲಿಲ್ಲ.

"ನೀನು ಹೇಳುವುದೆಲ್ಲ ಕಷ್ಟವಾದ ಕೆಲಸಗಳೇ ಒಂದೇ ದಿನದಲ್ಲಿ ಸುಲಭವಾಗಿ ಹಣ ಸಂಪಾದಿಸುವ ದಾರಿ ಇದ್ದರೆ ಹೇಳು" ಎಂದನು ರಂಗ.

ಜಿ. ರಾಮಲಕ್ಷ್ಮಿ



"ನೀನು ಕೇಳುವುದು ಬಹಳ ಚೆನ್ನಾಗಿದೆ ! ಒಂದೇ ದಿನದಲ್ಲಿ ಹಣ ಸಂಪಾದನೆಯಾಗಬೇಕಾದರೆ, ಕಳ್ಳತನದ ಹೊರತು ಬೇರೆ ದಾರಿ ಯಾವುದೂ ಇಲ್ಲ !" ಎಂದನು ಸ್ನೇಹಿತ.

ಹೌದು. ಅದೇ ಒಳ್ಳೆಯದೆನಿಸಿತು ರಂಗನಿಗೆ. ಇರುವ ಊರಿನಲ್ಲಿ ಎಲ್ಲರೂ ಗುರುತಿನವರೇ ಆದುದರಿಂದ, ಕಳವು ಮಾಡಲು ಬೇರೆ ಊರಿಗೆ ಹೋಗಬೇಕೆಂದುಕೊಂಡನು.

ಮರುದಿನ ಬೆಳಿಗ್ಗೆ ರಂಗನು ಹೆಂಡತಿಯೊಂದಿಗೆ, "ಹಣ ಸಂಪಾದಿಸಿಕೊಂಡು ಬರಲು ಪಕ್ಕದ ಊರಿಗೆ ಹೋಗಿ ಬರುತ್ತೇನೆ. ಬಂದ ಕೂಡಲೇ ಚಿನ್ನದ ಸರವನ್ನೂ, ಒಡ್ಯಾಣವನ್ನೂ ಮಾಡಿಸುತ್ತೇನೆ. ಈ ಸಾರಿ ನಿನ್ನ ಆಸೆ ಖಂಡಿತ ನೆರವೇರುತ್ತದೆ. ಜಾಗ್ರತೆಯಿಂದಿರು" ಎಂದು ಹೇಳಿ ಮನೆಯಿಂದ ಹೊರಟನು.

ಹೋಗಿ ಹೋಗಿ ರಂಗನು ಮಧ್ಯಾಹ್ನದ ಹೊತ್ತಿಗೆ ಒಂದು ಊರನ್ನು ಸೇರಿದನು. ಆಗ ಅಲ್ಲಿ ಸಂತೆ ನಡೆಯುತ್ತಾ ಇದ್ದಿತು. ಸಂತೆಯ ವ್ಯಾಪಾರಕ್ಕೆ ಬರುವ ಒಬ್ಬೊಬ್ಬರನ್ನೂ ಲಕ್ಷ್ಯಗೊಟ್ಟು ಪರೀಕ್ಷಿಸುತ್ತಾ ತಿರುಗಾಡತೊಡಗಿದನು ರಂಗ. ಯಾರಾದರೂ ಭಾಗ್ಯವಂತರ ಹಾಗೆ ಕಂಡರೆ, ಆ ದಿನ ರಾತ್ರಿ ಹೇಗಾದರೂ ಅವರ ಮನೆಯೊಳಗೆ ಹೊಕ್ಕು, ಕಳ್ಳತನ ಮಾಡಬೇಕೆಂಬುದು ಅವನ ಆಲೋಚನೆ.

ಆಗ ರಂಗನಿಗೆ ಸಂತೆಗೆ ಬಂದಿದ್ದ ರೈತ ದಂಪತಿಗಳ ಜೋಡಿಯೊಂದು ಕಂಡುಬಂದರು. ಅವರು ನೋಡಿದರೆ ಭಾಗ್ಯವಂತರ ಹಾಗೆ ಇರಲಿಲ್ಲ ನಿಜ. ಅವರ ಮಾತು ರಂಗನನ್ನು ಥಕ್ಕನೆ ಹಿಡಿದೆಳೆಯಿತು, "ಏನೇ, ಚೀಲದಲ್ಲಿರುವ ಚಿನ್ನದ ಸರ, ಒಡ್ಯಾಣ ಪ್ರತ್ಯೇಕವಾಗಿಟ್ಟುಕೋ. ಬೇರೆ ಸಾಮಾನುಗಳೊಂದಿಗೆ ಬೆರೆಸಿಬಿಡಬೇಡ. ಮನೆಗೆ ಹೋದ ಕೂಡಲೇ ಜಾಗ್ರತೆಯಿಂದ ಗೂಡಿನೊಳಗೆ ಇಟ್ಟುಬಿಡು. ಮರೆಯಬೇಡ" ಎಂದನು ಗಂಡ.

ಈ ಮಾತು ಕೇಳಿದ ಕೂಡಲೇ ರಂಗನು ಗಕ್ಕನೆ ನಿಂತನು. ತನ್ನ ಸಮಸ್ಯೆ ಒಮ್ಮೆಗೇ ತೀರಿಹೋಗುವ ಹಾಗೆ ಅವನಿಗೆ ತೋರಿತು. ತಾನು ಹಣವನ್ನು ಕದ್ದುಕೊಂಡು ಹೋಗಿ, ಅದರಿಂದ ಚಿನ್ನದ ಸರ, ಒಡ್ಯಾಣ ಮಾಡಿಸಬೇಕೆಂದರೆ, ಸಿದ್ಧವಾದ ಆ ವಸ್ತುಗಳೇ ಈಗ ಕಣ್ಣ ಮುಂದಿವೆ ! ಇದಕ್ಕಿಂತ ಹೆಚ್ಚಿನ ಅದೃಷ್ಟವೇನಿದೆ ?

ರಂಗನು ಆ ರೈತ ದಂಪತಿಗಳನ್ನು ಚೆನ್ನಾಗಿ ಗುರುತಿಟ್ಟುಕೊಂಡು ತಿರುಗಿದನು. ಅವರು ಸಂತೆಯಿಂದ ಸಾಮಾನುಗಳನ್ನು ಹೊತ್ತುಕೊಂಡು ಮನೆಗೆ ಹೋದರು.

ಸ್ವಲ್ಪ ಹೊತ್ತಿಗೆ ರಂಗನು ಅಲ್ಲಿಗೆ ಹೋಗಿ, ಅವರನ್ನು ನೋಡಿ,"ಅಯ್ಯಾ, ದೂರದಿಂದ ಬಂದಿದ್ದೇನೆ. ಇದು ನನಗೆಹೊಸ ಊರು. ಈ ದಿನ ರಾತ್ರಿ ನಿಮ್ಮ ಮನೆಯಲ್ಲಿ ಆಶ್ರಯ ಕೊಡುವಿರಾ ?" ಎಂದನು. ರೈತನು ಆದರ ಭಾವದಿಂದ, "ಆಗಲಿ, ಸಂತೋಷ,

ಈ ರಾತ್ರೀ ಅಂತ ಏನು, ಈ ಊರಲ್ಲಿರುವವರೆಗೆ ನಮ್ಮ ಮನೆಯಲ್ಲಿರಲು ಅಡ್ಡಿ ಏನಿಲ್ಲ" ಎಂದನು.

ಆ ದಿನ ರಾತ್ರಿ ಆ ರೈತನ ಹೆಂಡತಿ ರಂಗನಿಗೆ ರುಚಿಕರವಾದ ಅಡಿಗೆ ಮಾಡಿ ಬಡಿಸಿದಳು. ರಂಗನು ಮಾತ್ರ ಜಾಗರೂಕತೆಯಿಂದ ಉಂಡನು. ಹೊಟ್ಟೆ ತುಂಬಿ ಮತ್ತು ಹಿಡಿದು ಬರುವ ನಿದ್ದೆ ರಾತ್ರಿಯ ಕೆಲಸವನ್ನು ಕೆಡಿಸಬಹುದೆಂದುಕೊಂಡು ಮಿತವಾಗಿಯೇ ಊಟ ಮಾಡಿದನು.

ರಾತ್ರಿ ಮಲಗುವ ಮೊದಲು ರೈತನು ಹೆಂಡತಿಯೊಂದಿಗೆ, "ಚಿನ್ನದ ಸರ, ಒಡ್ಯಾಣಗಳ ಮೂಟೆ ಗೂಡಿನಲ್ಲಿ ಭದ್ರವಾಗಿಟ್ಟಿದ್ದಿಯಷ್ಟೆ? ಕೆಳಗೆ ಇಟ್ಟರೆ ಇಲಿ ಹೆಗ್ಗಣ ಕಡಿದೀತು!" ಎಂದನು.

"ಮೇಲಿನ ಗೂಡಿನಲ್ಲೇ ಭದ್ರವಾಗಿಟ್ಟಿದ್ದೇನೆ" ಎಂದಳು ಹೆಂಡತಿ.

ಈ ಮಾತನ್ನು ರಂಗನು ಕೇಳಿ, ತನ್ನ ಬೇಳೆ ಬೆಂದಿತೆಂದು ಬಹಳ ಸಂತೋಷಪಟ್ಟನು. ಅವನು ಆ ಗೂಡನ್ನು ಚೆನ್ನಾಗಿ ಗುರುತಿಟ್ಟುಕೊಂಡು, ಮಧ್ಯ ರಾತ್ರಿ ಕಳೆದ ಮೇಲೆ ಎದ್ದು ರೈತದಂಪತಿಗಳಿರುವ ಕೋಣೆಗೆ ಹೋದನು.

ರೈತನು ಗಾಢವಾದ ನಿದ್ದೆಯಲ್ಲಿ ಮುಳುಗಿ ಗೊರಕೆ ಹೊಡೆಯುತ್ತಿದ್ದನು. ರೈತನ ಹೆಂಡತಿ ಪೂರ್ತಿ ಮುಸುಗು ಹಾಕಿಕೊಂಡು ಮುದುಡಿ ಮಲಗಿದ್ದಾಳೆ.

"ಇವರು ತುಂಬ ಅಜಾಗ್ರತೆಯವರೇ ಸರಿ. ಅಷ್ಟೊಂದು ಬಂಗಾರದ ನಗವನ್ನು ಈ ಸಣ್ಣ ಮನೆಯ ಗೂಡಿನೊಳಗಿಟ್ಟುಕೊಂಡು ನಿಶ್ಚಿಂತೆಯಿಂದ ಹೀಗೆ ನಿದ್ದೆ ಮಾಡುವುದೆಂದರೆ ಮತ್ತೇನು?" ಎಂದುಕೊಂಡರೂ, ಅದು ಒಂದು ರೀತಿಯಲ್ಲಿ ತನಗೆ ಅದೃಷ್ಟವೆಂದು ಸಂತೋಷಿಸುತ್ತ ಗೂಡಿನ ಹತ್ತಿರ ಹೋದನು ರಂಗ.

ಗೂಡಿನಲ್ಲಿ ಒಂದು ಮೂಟೆ ಇದ್ದಿತು. ಭಾರವಾಗಿ ತುಸು ದೊಡ್ಡದಾಗಿಯೇ ಇದ್ದಿತು. ಚಿನ್ನದ ಸರ,



ಒಡ್ಯಾಣಗಳಿದ್ದ ಮೂಟೆಯಾದರೆ ಅಷ್ಟು ದೊಡ್ಡದೂ ಅಷ್ಟು ಭಾರವೂ ಇರಲಾರದಷ್ಟೆ? ಬೇರೆ ಯಾವ ಧಾನ್ಯಗಳೊಳಗೋ ಆ ನಗಗಳನ್ನು ಅಡಗಿಸಿಟ್ಟಿರಬೇಕು, ಎಂದುಕೊಂಡನು ರಂಗ. ಅಷ್ಟೊಂದು ಬುದ್ಧಿವಂತರಾಗಿರುವುದಕ್ಕೆ ಅವರನ್ನು ಮೆಚ್ಚಿಕೊಳ್ಳುತ್ತ, ಗೂಡಿನಿಂದ ಬಲವಾಗಿ ಆ ಚೀಲವನ್ನು ಎಳೆಯಲು ನೋಡಿದನು. ಆಗ ಕಾಲು ತಪ್ಪಿ ಪಕ್ಕದಲ್ಲಿದ್ದ ಮುಕ್ಕಾಲಿಗೆಗೆ ತಾಗಿ ಅದು ಹೊರಳಿ ಬಿದ್ದಿತು.

ಆಗ ಆದ ದೊಡ್ಡ ಶಬ್ದಕ್ಕೆ ರೈತನೂ, ಹೆಂಡತಿಯೂ ಎದ್ದು ಬಿಟ್ಟರು. ರಂಗನು ನಾಚಿಕೆಯಿಂದ ತಲೆ ತಗ್ಗಿಸಿಕೊಂಡನು. ಅವನಿಗೆ ಓಡಿ ಹೋಗುವ ಅವಕಾಶವೂ ಇಲ್ಲದೆ ಹೋಗಿತ್ತು.

"ಎಲಾ! ನೀನೋ? ಆ ಗೂಡಿನ ಹತ್ತಿರ ನಿನಗೇನು ಕೆಲಸ?" ಎಂದು ಕೇಳಿದ ರೈತ.

ರಂಗನು ಮಾತಾಡಿದಿರಲು, "ಚಿನ್ನದ ಸರ, ಒಡ್ಯಾಣಗಳೇನು? ಆ ಚೀಲದಲ್ಲಿ ಅವೇನೂ ಇಲ್ಲ.

ಒಳ್ಳೆಯ ತರಗತಿಯ ಬೀಜದ ಬತ್ತದ ಚೀಲವದು !" ಎಂದು ಹೇಳಿ ರೈತನು ಜೋರಾಗಿ ನಕ್ಕನು.

"ನೋಡಿದರೆ ಮರ್ಯಾದಸ್ಥನ ಹಾಗೆ ಕಾಣುವೆಯಲ್ಲಾ ? ಕಳ್ಳತನ ಮಾಡುವೆಯೇನು ?" ಎಂದು ಕೇಳಿದಳು ರೈತನ ಹೆಂಡತಿ.

"ನಾನು ಕಳ್ಳತನ ಮಾಡಬೇಕೆಂದು ಅಂದುಕೊಳ್ಳಲಿಲ್ಲ ಅಮ್ಮಾ, ನೀವು ಬಹಳ ಒಳ್ಳೆಯವರಾಗಿದ್ದೀರಿ. ಹೊಸಬರನ್ನು ಹೀಗ ನಂಬಬಾರದೆಂದು ತೋರಿಸಲಿಕ್ಕೆ, ನಿದ್ದೆ ಬಾರದ್ದರಿಂದ, ನಗಗಳನ್ನು ಅಲ್ಲಿಂದ ತೆಗೆದು ನಿಮ್ಮನ್ನು ಸ್ವಲ್ಪ ಗಾಬರಿ ಪಡಿಸಿ ಮತ್ತೆ ಕೊಡೋಣವೆಂತಲೇ ಇದ್ದೆ. ಆದರೆ ನಿಮ್ಮ ಮಾತಿನಿಂದ ನಗಗಿಗ ಯಾವುದೂ ಇಲ್ಲದ್ದು ನೋಡಿದರೆ, ನನ್ನನ್ನು ಮೋಸ ಪಡಿಸಲಿಕ್ಕೆ ನೀವೇ ಆಟ ಹೂಡಿದ ಹಾಗಿದೆ !" ಎಂದು ರಂಗನು ತನ್ನ ತಪ್ಪನ್ನು ಮುಚ್ಚಿಕೊಳ್ಳುವ ಪ್ರಯತ್ನ ಮಾಡಿದ.

ರೈತನು ನಕ್ಕು "ನಿನ್ನ ಉದ್ದೇಶ ಏನಿದ್ದರೂ ನಮ್ಮ ಉದ್ದೇಶ ನೀನು ಅಂದುಕೊಂಡ ಹಾಗೇನಿಲ್ಲ. ನಮ್ಮ ಮನೆಯಲ್ಲಿ ಬಂಗಾರದ ಹೆಸರೇ ಇಲ್ಲ. ನಾಲ್ಕು ವರ್ಷಗಳವರೆಗೆ ಬೇರೆಯವರ ಗದ್ದೆಗಳನ್ನು ಗೇಣಿಗೆ ವಹಿಸಿ ಸಾಗುವಳಿ ಮಾಡಿದೆ. ಸ್ವಲ್ಪ ಹಣ ಕೂಡಿಸಿ ಈ ವರ್ಷ ಸ್ವಂತ ಗದ್ದೆ ಕೊಂಡುಕೊಂಡೆ. ಎರಡು ಎಕರೆ ಹೊಲ ಇದ್ದರೆ ನನ್ನ ಹೆಂಡತಿ ಬಹಳ ವರ್ಷಗಳಿಂದ ಆಶೆಪಡುವ ಚಿನ್ನದ ಸರ ಮತ್ತು ಒಡ್ಯಾಣ ಮಾಡಿಸಲು ಒಂದು ವರ್ಷದ ಬೇಸಾಯ ಸಾಕು. ಅದಕ್ಕಾಗಿ ಸಂತೆಯಲ್ಲಿ ಒಳ್ಳೆಯ ಬೀಜದ ಬತ್ತ ಕೊಂಡುಕೊಂಡು ಅದಕ್ಕೆ ಚಿನ್ನದ ಸರ, ಒಡ್ಯಾಣ ಅಂತಲೇ ಹೆಸರಿಟ್ಟುಕೊಂಡು ಮಾತಾಡಿಕೊಂಡೆವು" ಎಂದು ಮತ್ತೊಮ್ಮೆ ನಕ್ಕನು.

ಎರಡು ಎಕರೆ ಸ್ವಂತ ಗದ್ದೆಯಿಂದ ಒಂದು ವರ್ಷದಲ್ಲಿ ಹೆಂಡತಿಗೆ ಬೇಕಾದ ನಗಗಳನ್ನು ಮಾಡಿಸಬಹುದೆಂದು ಅವನು ಹೇಳಿದುದನ್ನು ಕೇಳಿ, ರಂಗನಿಗೆ ಬುದ್ಧಿ ಬಂತು. ತಾನು ನಾಲ್ಕು ಎಕರೆ ಗದ್ದೆಗಳು ಸ್ವಂತಕ್ಕಿರುವ ರೈತ. ಸೋಮಾರಿತನ ಬಿಟ್ಟು ಸ್ವಂತವಾಗಿ ಬೇಸಾಯ ಮಾಡಿದರೆ ತನ್ನ ಹೆಂಡತಿಗೆ ಚಿನ್ನದ ಸರ, ಒಡ್ಯಾಣಗಳನ್ನೇಕೆ, ಇನ್ನೂ ಬೇಕಾದ್ದೆಲ್ಲಾ ಮಾಡಿಸಬಹುದು !

ಅವನು ಆ ರೈತ ದಂಪತಿಗಳಿಗೆ ಕೃತಜ್ಞತೆ ಹೇಳಿಕೊಂಡು, ಮನೆಗೆ ಹೋದನು. ಸ್ವತಃ ದುಡಿಯುತ್ತ ಬೇಸಾಯ ಪ್ರಾರಂಭಿಸಿ, ಪ್ರತಿ ವರ್ಷದಲ್ಲಿಯೂ ಹೆಂಡತಿಗೆ ಹೊಸ ಹೊಸ ನಗಗಳನ್ನು ಮಾಡಿಸಲಿಕ್ಕೂ ತೊಡಗಿದನು.

ಆಮೇಲೆ ರಂಗನ ಹೆಂಡತಿ ಬೇರೇನಾದರೂ ವ್ಯಾಪಾರ ಮಾಡುವಂತೆ ಗಂಡನಿಗೆ ಹೇಳದೆ, ತಾನೂ ಗಂಡನೊಂದಿಗೆ ಸಂತೋಷದಿಂದ ದುಡಿಯುತ್ತಿದ್ದಳು.






# ಆಶೆಯ ಪರಿಣಾಮ

ಮತ್ತೆ ಬರುವ ರಾಜಾ ತ್ರಿವಿಕ್ರಮನಿಗೆ ಹೇಳಲು ಬೇತಾಳವು ಇನ್ನೊಂದು ಕಥೆಯನ್ನು ನೆನಪಿಸಿಕೊಳ್ಳುವಷ್ಟರಲ್ಲಿ, ತ್ರಿವಿಕ್ರಮನು ಮರದ ಮೇಲೆ ಹತ್ತಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲಿಗೇರಿಸಿಕೊಂಡು ಎಂದಿನಂತೆ ಮೌನ ಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದ ಬಾಯಿಯ ಮೂಲಕ ಬೇತಾಳವು ಮಾತಾಡತೊಡಗಿತು : "ಸಾಹಸವೇ ಮೈಯಾಗಿರುವ ಎಲೈ ಮಹಾರಾಜನೇ. ಕಾರ್ಯಸಾಧನೆಯ ಮೇಲೆ ನಿನಗಿರುವ ಈ ಅಚಂಚಲವಾದ ದೀಕ್ಷೆಯನ್ನು ನೋಡುವಾಗ, ಯಾವುದೋ ಅಪೂರ್ವ ಶಕ್ತಿಗಳನ್ನು ಸಂಪಾದಿಸಬೇಕೆಂಬ ಕೋರಿಕೆ ನಿನಗಿರುವಂತೆ ಅನುಮಾನವಾಗುತ್ತದೆ. ಮಂತ್ರ ತಂತ್ರಗಳ ಮೂಲಕವಾಗಿ ಅವುಗಳನ್ನು ಸಾಧಿಸುವುದು ಬಹಳ ಕಷ್ಟವೇ. ಸಾಧಿಸಿಕೊಂಡ ಮೇಲೆ ಅಂಥವುಗಳನ್ನು ಸ್ವಂತ ಪ್ರಯೋಜನಕ್ಕೆ ಉಪಯೋಗಿಸಿಕೊಳ್ಳಲಿಕ್ಕೂ ಸಾಧ್ಯವಾಗಲಾರದು. ಅದರಿಂದ ಅಪಾಯವೇ ಹೆಚ್ಚು. ಇದಕ್ಕೆ ಎಚ್ಚರಿಕೆಯಾಗುವಂತೆ ನಿನಗೆ ರಾಮಶರ್ಮ, ಕೃಷ್ಣಶರ್ಮರೆಂಬ ತಂದೆ ಮಗಂದಿರ ಒಂದು

## ಬೇತಾಳ ಕಥೆಗಳು...



ಕಥೆಯನ್ನು ಹೇಳುತ್ತೇನೆ. ನಡೆಯುವ ದಣಿವು ಗೊತ್ತಾಗದ ಹಾಗೆ ಕಥೆಯನ್ನು ಕೇಳು" ಎಂದು ಕಥೆಯನ್ನು ಹೇಳತೊಡಗಿತು:

ವೈಶಾಲೀ ನಗರದಲ್ಲಿ ರಾಮಶರ್ಮನೆಂಬೊಬ್ಬ ಬ್ರಾಹ್ಮಣನು ಪೌರೋಹಿತ್ಯ ಮಾಡುತ್ತ ಜೀವನ ನಡೆಸಿಕೊಂಡಿದ್ದನು. ಪೌರೋಹಿತ್ಯದಲ್ಲಿ ಅವನಿಗೆ ಒಳ್ಳೆಯ ಸಂಪಾದನೆಯಾಗುತ್ತಲೂ ಇದ್ದಿತು. ಆತನದು ದೊಡ್ಡ ಸಂಸಾರವೂ ಅಲ್ಲವಾದುದರಿಂದ ಚಿಂತೆಯೇನಿರಲಿಲ್ಲ. ಅವನೂ, ಅವನ ಹೆಂಡತಿಯೂ ಒಬ್ಬ ಮಗನೂ, ಒಬ್ಬಳು ಮಗಳೂ ಇಷ್ಟೇ ಮಂದಿ. ತೃಪ್ತಿಯಿದ್ದರೆ ಸಾಕಾಗುವಷ್ಟು ಗದ್ದೆಗಳೂ ಇದ್ದುವು.

ಹೀಗೆ ಆರ್ಥಿಕ ಮುಗ್ಗಟ್ಟುಗಳು ಏನಿಲ್ಲದೆ, ಕಾಲ ಕಳೆಯುತ್ತಿದ್ದರೂ ರಾಮಶರ್ಮನಿಗೆ ಜೀವನದಲ್ಲಿ ಅಸಂತೃಪ್ತಿ ಇದ್ದೇ ಇದ್ದಿತು. ರಾಜಾಸ್ಥಾನದಲ್ಲಿರುವ ಕವಿಪಂಡಿತರೂ, ಉದ್ಯೋಗಸ್ಥರೂ ಅನುಭವಿಸುವ ಭೋಗಭಾಗ್ಯಗಳನ್ನು ನೋಡಿ ಈರ್ಷ್ಯೆಪಡುತ್ತಿದ್ದನು. ತಾನು ಕೂಡಾ ಯಾವುದೋ ಒಂದು ವಿಧವಾಗಿ ರಾಜನ ಆದರಣೆಯನ್ನು ಪಡೆಯಲು ಸಾಧ್ಯವಾದರೆ, ಅವರ ಹಾಗೆಯೇ ವೈಭವದಿಂದ ಬದುಕುತ್ತಿದ್ದೆನಲ್ಲಾ ಎಂದುಕೊಳ್ಳುತ್ತಾ, ಎಂಜಲು ನುಂಗುವನು.

ರಾಮಶರ್ಮನ ಮಗ ಕೃಷ್ಣಶರ್ಮನು ದೊಡ್ಡವನಾದ ಮೇಲೆ ಪೌರೋಹಿತ್ಯದಲ್ಲಿ ತಂದೆಗೆ ಸಹಾಯ ಮಾಡತೊಡಗಿದನು. ಆ ಪರಿಸ್ಥಿತಿಯಲ್ಲಿ ರಾಮಶರ್ಮನಿಗೆ ಒಂದು ಆಲೋಚನೆಯುಂಟಾಯಿತು. ತಾನು ಹಿಮಾಲಯಕ್ಕೆ ಹೋಗಿ, ಅಲ್ಲಿರುವ ಯಾವ ಸಿದ್ಧ ಪುರುಷನ ಮೂಲಕವಾಗಿಯಾದರೂ ಏನಾದರೂ ಅಪೂರ್ವ ಶಕ್ತಿಗಳನ್ನು ಸಂಪಾದಿಸಿಕೊಂಡು ಬಂದುಬಿಟ್ಟರೆ, ಬಹಳ ದೊಡ್ಡ ರೀತಿಯಲ್ಲಿ ಬದುಕಬಹುದೆಂದುಕೊಂಡನು. ಮೊದಲು ಕಷ್ಟಪಟ್ಟರೂ ಆಮೇಲೆ ಐಶ್ವರ್ಯವಂತನಾಗಿರಬಹುದು.

ರಾಮಶರ್ಮನು ಹೀಗೆ ನಿಶ್ಚಯಕ್ಕೆ ಬಂದು, ಮನೆಯಲ್ಲಿ ಯಾರಿಗೂ ಏನೂ ಹೇಳದೆ, ಒಂದು ದಿನ ಹೊರಟು ಹಿಮಾಲಯಕ್ಕೆ ಹೋದನು. ಅಲ್ಲಿ ಒಬ್ಬ ಸಿದ್ಧನನ್ನು ಆಶ್ರಯಿಸಿ, ಸೇವೆ ಮಾಡುತ್ತ ಬೇಗದಲ್ಲೇ ಅವನ ಆದರಣೆಗೆ ಪಾತ್ರನಾದನು.

ಒಂದು ದಿನ ಸಿದ್ಧನು ರಾಮಶರ್ಮನು ತನ್ನ ಬಳಿಗೆ ಬಂದು ಸೇವೆ ಮಾಡುವುದರ ಕಾರಣವನ್ನು ತಿಳಿಯಲಿಕ್ಕಾಗಿ ಅವನೊಂದಿಗೆ, "ಅಪ್ಪಾ, ಹೆಂಡತಿ ಮಕ್ಕಳೊಂದಿಗೆ ತಾಪತ್ರಯದಲ್ಲಿರುವವರಿಗೆ ಹೀಗೆ ಓಡಿಬರುವ ಆಲೋಚನೆ ಹುಟ್ಟುವುದೇನೂ ವಿಶೇಷವಲ್ಲ. ತಪ್ಪೂ ಅಲ್ಲ. ಲೋಗರಿಗೆ ಅದು ಸಹಜವೇ. ನಿನಗಂತೂ ಬೆಳೆಯುವ ಮಕ್ಕಳ ಮದುವೆ ಮುಂತಾದ ಬಾಧ್ಯತೆಗಳಿವೆ, ಆದುದರಿಂದ ನೀನು ಮನೆಗೆ ಹಿಂದಿರುಗಿ ಹೋಗಿಬಿಡು. ಆದರೂ ಇಷ್ಟು ದಿನಗಳವರೆಗೆ ನೀನು ನನಗೆ ಸೇವೆ ಮಾಡಿದುದರಿಂದ ನೀನೇನಾದರೂ ಕೇಳಬೇಕಾಗಿದ್ದರೆ ಕೇಳು, ಕೊಡುತ್ತೇನೆ" ಎಂದನು.



ಅದಕ್ಕೆ ರಾಮಶರ್ಮನು, "ನನಗೆ ಅಪೂರ್ವ ಶಕ್ತಿಗಳು ಬರುವ ಹಾಗೆ ಏನಾದರೊಂದು ಒಳ್ಳೆಯ ಮಂತ್ರವನ್ನು ಉಪದೇಶ ಮಾಡಿಬಿಡಿರಿ, ಸಾಕು" ಎಂದು ಕೈಮುಗಿದನು.

ಸಿದ್ಧನು ಹಾಗೇ ಆಗಲೆಂದು, "ಅಪ್ಪಾ, ನಿನಗೆ ಒಂದು ಮಂತ್ರವನ್ನು ಉಪದೇಶ ಮಾಡುತ್ತೇನೆ. ಆ ಮಂತ್ರಶಕ್ತಿಯ ಕಾರಣದಿಂದ ನಿನಗೆ ಕೆಲವು ಅಪೂರ್ವ ಶಕ್ತಿಗಳು ಲಭಿಸುತ್ತವೆ. ಆದರೆ ನೀನು ಎಂದಿಗೂ ಧನದ ವ್ಯಾಮೋಹಕ್ಕೆ ದಾಸನಾಗಬಾರದು. ಮಂತ್ರಶಕ್ತಿಯನ್ನು ಹತ್ತು ಜನರ ಉಪಯೋಗಕ್ಕಾಗಿ ಉಪಯೋಗಿಸು, ಅದರಿಂದ ನಿನಗೆ ಒಳ್ಳೆಯ ಹೆಸರು ಬರುತ್ತದೆ" ಎಂದು ಹೇಳಿ ರಾಮಶರ್ಮನಿಗೆ ಮಂತ್ರವನ್ನು ಉಪದೇಶ ಮಾಡಿದನು.

ಹೀಗೆ ರಾಮಶರ್ಮನು ಹೋದ ಕೆಲಸವನ್ನು ಸಾಧಿಸಿಕೊಂಡು ಸಂತೋಷದಿಂದ ಮನೆಗೆ ಹಿಂದಿರುಗಿ ಬಂದನು. ಅವನು ಇಲ್ಲದ ಸಮಯದಲ್ಲಿ ಅವನ ಮಗ ಕೃಷ್ಣಶರ್ಮನು, ಪೌರೋಹಿತ್ಯವನ್ನು ಮಾಡುತ್ತ, ಯಾವ ತೊಂದರೆಯೂ ಇಲ್ಲದೆ ಕುಟುಂಬವನ್ನು ನಡೆಸಿಕೊಂಡು ಬರುತ್ತಿದ್ದನು.

ಆದರೆ ರಾಮಶರ್ಮನು ಮನೆಗೆ ಹಿಂದಿರುಗಿ ಬಂದ ಕಾಲದಲ್ಲಿ ವೈಶಾಲೀ ರಾಜ್ಯವು ಬರಗಾಲಕ್ಕೆ ಒಳಗಾಗಿತ್ತು. ಮಳೆ ಬಾರದೆ ಹೋದುದರಿಂದ ಜನರೆಲ್ಲ ನಾನಾ ಕಷ್ಟಗಳಿಗೆ ಗುರಿಯಾಗಿದ್ದರು. ಎರಡು ವರ್ಷಗಳಿಂದಲೂ ಮಳೆ ಬಂದಿಲ್ಲವೆಂದು ರಾಮಶರ್ಮನಿಗೆ ತಿಳಿಯಿತು. ರಾಜನು ಮಳೆಯನ್ನು ಬರಿಸಲು ಶಾಸ್ತ್ರಜ್ಞರು ಹೇಳಿದಂತೆ ವರುಣ ಜಪಗಳನ್ನೂ, ರುದ್ರ ಯಾಗಗಳನ್ನೂ ಮಾಡಿಸಿದರೂ ಫಲವೇನೂ ಲಭಿಸಿರಲಿಲ್ಲ. ಯಾರಾದರೂ ತಮ್ಮ ಶಕ್ತಿಯಿಂದಲೋ, ಯುಕ್ತಿಯಿಂದಲೋ ರಾಜ್ಯದಲ್ಲಿ ಮಳೆ ಬರುವ ಹಾಗೆ ಮಾಡಿದರೆ ಅವರಿಗೆ ಕನಕಾಭಿಷೇಕ ಮಾಡಿಸುವೆನೆಂದು ರಾಜನು ಪ್ರಕಟಪಡಿಸಿದನು.

ಕನಕಾಭಿಷೇಕದ ಸಂಗತಿ ಕೇಳಿದ ಕೂಡಲೇ ರಾಮಶರ್ಮನು ಬಹಳ ಉತ್ಸಾಹದಿಂದ ಮಗನನ್ನು ರಹಸ್ಯವಾಗಿ ಕರೆದು, "ನೋಡಪ್ಪಾ, ನಾನು ಬಹಳ ಶ್ರಮಪಟ್ಟು ಮಹಾತ್ಮನಾದ ಸಿದ್ಧನ ಸೇವೆಮಾಡಿ, ಅದ್ಭುತವಾದೊಂದು ಮಂತ್ರೋಪದೇಶ ಪಡೆದಿದ್ದೇನೆ. ಪವಿತ್ರವಾದ ಹಿಮಾಲಯ ಪರ್ವತಗಳಲ್ಲಿ ನಡೆದು ಬಹು ಶ್ರಮಪಟ್ಟು ಪಡೆದ ಮಹಾ ಮಂತ್ರವದು. ಆ ಮಂತ್ರದ ಶಕ್ತಿಯಿಂದ ನಾನು ನಮ್ಮ ರಾಜ್ಯದಲ್ಲಿ ಮಳೆ ಬರುವ ಹಾಗೆ ಮಾಡಲು ಸಾಧ್ಯವಿದೆ !" ಎಂದನು.

ತಂದೆಯ ಮಾತು ಕೇಳಿ ಕೃಷ್ಣಶರ್ಮನು ಆಶ್ಚರ್ಯಪಟ್ಟು, "ನಿಜವೇನಾ ? ನೀವು ಮಂತ್ರಶಕ್ತಿಯ ದ್ವಾರಾ ಮಳೆ ಸುರಿಯುವ ಹಾಗೆ ಮಾಡುವಿರಾ ? ಪ್ರಜೆಗಳು ನೀರಿಲ್ಲದೆ ಯಾತನೆ ಪಡುತ್ತಿರುವಾಗ, ಬೇಗನೇ ಆ ಕೆಲಸ ಸಾಧಿಸಿರಿ ಅಪ್ಪಾ. ನಿಮ್ಮಿಂದ ರಾಜ್ಯಕ್ಕೆಲ್ಲಾ ಒಳ್ಳೇದಾಗಲಿ !" ಎಂದನು.

" ರಾಜ್ಯಕ್ಕೆ ಒಳ್ಳೆಯದು ಮಾಡುವುದೇನೋ ಸರಿಯೆ. ನಮ್ಮ ಸಂಗತಿ ಆಲೋಚಿಸಬೇಕಷ್ಟೆ? ಮೊದಲು ಈ ಸಂಗತಿ ರಾಜನೊಂದಿಗೆ ಹೇಳದೆ ಆ ಕೆಲಸ ಮಾಡಿಬಿಟ್ಟರೆ, ಅದಕ್ಕೆ ಕಾರಣ ನಾನೆಂದು ರಾಜನಿಗೆ ಹೇಗೆ ಗೊತ್ತಾಗುತ್ತದೆ? ಹಾಗೆ ಮಾಡಿದರೆ ರಾಜನು ಪ್ರಕಟಿಸಿದ ಕನಕಾಭಿಷೇಕವು ಸಹಾ ದಕ್ಕದೆ ಹೋಗಿಬಿಡುತ್ತದೆ!" ಎಂದನು ರಾಮಶರ್ಮ.

ಅದುವರೆಗೂ ತಂದೆಯ ಮಾತಿಗೆ ಇದಿರಾಡದಿದ್ದ ಕೃಷ್ಣಶರ್ಮನು, ಈಗ ಸ್ವಲ್ಪ ಧೈರ್ಯ ತಂದು ಕೊಂಡು, " ಅಪ್ಪಾ, ನಾವೇನೋ ನಮ್ಮಿಂದಾಗುವ ವೃತ್ತಿಯಿಂದ ಸುಖವಾಗಿಯೇ ಬದುಕಿಕೊಂಡಿದ್ದೇವೆ, ಈ ಕನಕಾಭಿಷೇಕಾದಿಗಳೆಲ್ಲ ನಮಗೇಕೆ? ಎಲ್ಲರೂ ಸುಖವಾಗಿರುವುದನ್ನು ನೋಡುವ ಸಂತೋಷ ನಮಗೆ ಸಾಲದೆ?" ಎಂದನು.

ಮಗನ ಮಾತು ಕೇಳಿ ರಾಮಶರ್ಮನಿಗೆ ಕೋಪ ಬಂದಿತು. " ನಿನಗೇನು ಗೊತ್ತಿದೆಯೋ ಮಂಗಪೋರ! ಲೋಕಜ್ಞಾನವಿಲ್ಲದವನು. ಎಲ್ಲದಕ್ಕೂ ಒಳ್ಳೆಯದು; ನಿಧಿಯಂತಹ ನನ್ನ ಮಂತ್ರವನ್ನು ನಿನಗೂ ಉಪದೇಶಿಸುತ್ತೇನೆ. ಶ್ರದ್ಧೆಯಿಂದ ಗ್ರಹಿಸು, ನಾನು ಹೇಳಿದ ಹಾಗೆ ಕೇಳು" ಎಂದು ರಾಮಶರ್ಮನು ಮಗನಿಗೆ ಬಯ್ದು, ಸಿದ್ಧನು ಉಪದೇಶಿಸಿದ ಮಂತ್ರವನ್ನು ಮಗನಿಗೂ ಉಪದೇಶಿಸಿ, " ನೀನು, ಸ್ನಾನಮಾಡಿ ಶುಚಿಯಾಗಿ, ಈಶ್ವರನನ್ನು ಧ್ಯಾನಿಸುತ್ತ, ಉತ್ತರಾಭಿಮುಖವಾಗಿ ಒಂಟಿಗಾಲಲ್ಲಿ ನಿಂತು, ಈ ಮಂತ್ರವನ್ನು ಮೂರು ಸಾರಿ ಉಚ್ಚರಿಸಬೇಕು. ನೆನೆದದ್ದು ಆಗುತ್ತದೆ. ಅದು ಸಾಕೆನಿಸಿದಲ್ಲಿ ನಿಲ್ಲಿಸಲು ಉಪಸಂಹರಣ ಮಂತ್ರವನ್ನು ಅದೇ ಪದ್ಧತಿಯಲ್ಲಿ ಇನ್ನೊಬ್ಬರು ಮೂರು ಸಾರಿ ಪಠಿಸಬೇಕು. ಅದಕ್ಕೇ ಈ ಮಂತ್ರವನ್ನು ನಿನಗೂ ಉಪದೇಶಿಸುವುದು." ಎಂದು ಹೇಳಿ, ಮನೆಯಿಂದ ಹೊರಟು ಸೀದಾ ಮಹಾರಾಜನ ಬಳಿಗೆ ಹೋದನು.

ರಾಮಶರ್ಮನು ಹೇಳಿದ ಮಾತುಗಳನ್ನು ಕೇಳಿ ರಾಜನು ಸಂತೋಷದಿಂದ, ಬೇಗನೇ ಮಳೆ ಬರಿಸುವಂತೆ ಅವನನ್ನು ಕೇಳಿಕೊಂಡನು.



ರಾಮಶರ್ಮನು ವೈಶಾಲೀ ನಗರದ ಉತ್ತರ ದಿಕ್ಕಿನಲ್ಲಿರುವ ಈಶ್ವರನ ದೇವಾಲಯಕ್ಕೆ ಹೋದನು. ಅಲ್ಲಿಯ ಬತ್ತಿದ ಕೆರೆಯಲ್ಲಿ ತೋಡಲಾದ ಬಾವಿಗೆ ಇಳಿದು ಕಷ್ಟಪಟ್ಟು ಸ್ನಾನಮಾಡಿ ಕೆರೆಗಟ್ಟೆಯ ಮೇಲೆ ಒಂಟಿಕಾಲಲ್ಲಿ ಉತ್ತರಾಭಿಮುಖವಾಗಿ ನಿಂತು, ಮೂರು ಸಾರಿ ಮಂತ್ರವನ್ನು ಉಚ್ಚರಿಸಿದನು.

ಆದುವರೆಗೆ ಆಕಾಶದಲ್ಲೆಲ್ಲಿಯೂ ಇಲ್ಲದ ಕಾರ್ಮೋಡಗಳು ಕ್ಷಣಕ್ಷಣಕ್ಕೂ ನಾಲ್ಕು ಸುತ್ತಲಿಂದಲೂ ಎದ್ದು ಬರುವ ಸೇನೆಗಳ ಹಾಗೆ ಬಂದು ಮುಸುಗಿ ರಾಜ್ಯದ ಮೇಲೆಲ್ಲಾ ವ್ಯಾಪಿಸಿ, ಭೂಮಿ ದದ್ದರಿಸುವಂತೆ ಗುಡುಗಿ, ಮಿಂಚಿ, ಹೋರ್ಗಾಳಿಯೊಂದಿಗೆ ಮಳೆಸುರಿಯಲು ಪ್ರಾರಂಭವಾಯಿತು. ರಾಮಶರ್ಮನು ಆತ್ಮಾನಂದದಿಂದ ಈಶ್ವರಾಲಯದೊಳಗೆ ಪ್ರವೇಶಿಸಿದನು.

ನಗರದ ಪ್ರಜೆಗಳು ಆನಂದೋತ್ಸಾಹದಿಂದ ಮನೆಗಳೊಳಗಿನಿಂದ ಬೀದಿಗೆ ಬಂದು ನೃತ್ಯಮಾಡ ತೊಡಗಿದರು. ರಾಜನು ಕೂಡಾ ಪರಿವಾರದೊಂದಿಗೆ ಮಳೆಯಲ್ಲಿ ನೆನೆಯುತ್ತಾ ಈಶ್ವರಾಲಯಕ್ಕೆ ಬಂದು, ಕೈ ಜೋಡಿಸಿ ರಾಮಶರ್ಮನೊಂದಿಗೆ, "ಮಹಾನುಭಾವಾ, ತಮ್ಮ ಕಟಾಕ್ಷದಿಂದ ಮಳೆ ಬಂದು ದೇಶವು ರಕ್ಷಿಸಲ್ಪಟ್ಟಿತು. ನಾನು ಮಳೆಯನ್ನು ನಿಲ್ಲಿಸುವಂತೆ ಸುದ್ದಿ ಕಳುಹಿಸುವವರೆಗೂ ಹೀಗೇ ಮಳೆ ಬರುತ್ತಿರಲಿ." ಎಂದು ದೊಡ್ಡದೊಂದು ಬಂಗಾರದ ಹರಿವಾಣದ ತುಂಬಾ ಬಂಗಾರದ ನಾಣ್ಯಗಳನ್ನೂ, ನವರತ್ನಗಳನ್ನೂ ಇರಿಸಿ ಅದನ್ನು ರಾಮಶರ್ಮನಿಗೆ ಕೊಡಿಸಿ, ತನ್ನ ಅರಮನೆಗೆ ಹಿಂದಿರುಗಿ ಹೋದನು.

ಹೊರಗೆ ಒಂದೇ ಸಮನೆ ಮಳೆ ಸುರಿಯುತ್ತಾ ಇದ್ದಿತು. ನಿರ್ಮಾನುಷ್ಯವಾಗಿದ್ದ ಈಶ್ವರಾಲಯದೊಳಗೆ ದೀಪದ ಪ್ರಕಾಶದಲ್ಲಿ ರಾಮಶರ್ಮನೊಬ್ಬನೇ ಇದ್ದನು. ಅವನು ರಾಜನು ಕೊಟ್ಟ ರತ್ನಗಳನ್ನೂ, ನಾಣ್ಯಗಳನ್ನೂ ಕಣ್ಣಿನಿಂದಲೇ ಲೆಕ್ಕ ಮಾಡುತ್ತಲಿದ್ದನು. ಆ ಸಮಯದಲ್ಲಿ ಹೊಂಚಿಕೊಂಡಿದ್ದ ನಾಲ್ವರು ಕಳ್ಳರು ದೇವಾಲಯದೊಳಗೆ ಪ್ರವೇಶಿಸಿ, ರಾಮಶರ್ಮನನ್ನು ಒಂದೇಟಿಗೆ ಕೊಲೆ ಮಾಡಿ, ಧನ





ವನ್ನೆಲ್ಲಾ ಮೂಟೆಗಟ್ಟಿ ಹೊತ್ತುಕೊಂಡು ಯಾರಿಗೂ ತಿಳಿಯದಂತೆ ಎತ್ತಲೋ ಓಡಿಹೋಗಿ ಬಿಟ್ಟರು.

ಆ ದಿನ ಸಾಯಂಕಾಲದವರೆಗೂ ಮಳೆ ಸುರಿಯುತ್ತಲೇ ಇದ್ದಿತು. ಮಹಾರಾಜನು ಮಂತ್ರಿಯೊಂದಿಗೆ ಆಲೋಚನೆ ಮಾಡಿ, ಅದುವರೆಗೆ ಬಂದ ಮಳೆ ಸಾಕೆಂಬ ನಿರ್ಣಯಕ್ಕೆ ಬಂದನು.. ಅವನು ಆ ಸಂಗತಿಯನ್ನು ಹೇಳಲು ತನ್ನ ಮಂತ್ರಿಯನ್ನು ರಾಮಶರ್ಮನಿರುವ ಈಶ್ವರಾಲಯಕ್ಕೆ ಕಳುಹಿಸಿದನು. ಅಲ್ಲಿಗೆ ಹೋಗಿ ಮಂತ್ರಿ, ರಾಮಶರ್ಮನು ಹತ್ಯೆಗೊಂಡು ಬಿದ್ದಿರುವುದನ್ನು ನೋಡಿ ಬೆರಗಾಗಿ, ರಾಜನ ಬಳಿಗೆ ಧಾವಿಸಿ ಹಿಂದಿರುಗಿದನು.

ನಡೆದ ಘೋರ ಅನ್ಯಾಯವನ್ನು ತಿಳಿದು ರಾಜನು ಬಹಳವಾಗಿ ಚಿಂತಿಸಿದನು. ಈಗ ನಡೆಯುವ ಈ ಜಲಪ್ರಳಯವನ್ನು ನಿಲ್ಲಿಸಲು ರಾಮಶರ್ಮನ ಮಗನಿಂದ ಏನಾದರೂ ಸಾಧ್ಯವಾಗುವುದೋ ನೋಡುವಂತೆ ರಾಜನು ಮಂತ್ರಿಯನ್ನು ಕಳುಹಿಸಿದನು.

ಮಂತ್ರಿ ಬೇಗನೇ ರಾಮಶರ್ಮನ ಮನೆಗೆ ಹೋಗಿ, ರಾಮಶರ್ಮನ ಮರಣವನ್ನು ಕೃಷ್ಣಶರ್ಮನೊಂದಿಗೆ ಹೇಳಿ, ಬೇಗನೇ ಜಲಪ್ರಳಯ ತರುವ ಮಳೆಯನ್ನು ನಿಲ್ಲಿಸಬೇಕೆಂದೂ ಕೇಳಿಕೊಂಡನು. ತಂದೆಯ ಮರಣವನ್ನು ಕೇಳಿ ಕೃಷ್ಣಶರ್ಮನು ವಿಲಪಿಸತೊಡಗಿದನು. ಅವನ ತಾಯಿ ತಂಗಿಯರ ದುಃಖವನ್ನು ಹೇಳಿತೀರದು. ಮಂತ್ರಿ ಅವರನ್ನು ನೋಡಿ, "ಇನ್ನು ದುಃಖಿಸಬೇಡಿರಿ. ಮಳೆಯೇ ಇಲ್ಲದೆ ಬೆಂಗಾಡಾಗಿ ಹೋಗುತ್ತಿದ್ದ ವೈಶಾಲೀ ರಾಜ್ಯವನ್ನು ರಾಮಶರ್ಮರು ತಮ್ಮ ಮಂತ್ರಶಕ್ತಿಯಿಂದ ಕಾಪಾಡಿದರು. ಯಾವ ದುಷ್ಟರೋ ಅವರನ್ನು ಹೀಗೆ ಕೊಲೆಮಾಡಿ ನಿಮಗೂ ರಾಜ್ಯಕ್ಕೂ ತೀರದ ನಷ್ಟವನ್ನುಂಟುಮಾಡಿದರು. ಅವರನ್ನು ಹುಡುಕಿ ಹಿಡಿದು ಶಿಕ್ಷಿಸದೆ ಬಿಡುವುದಿಲ್ಲ, ಈಗ ಬರಲಿರುವ ಪ್ರಳಯದಿಂದ ದೇಶವನ್ನು ಕಾಪಾಡಬೇಕಾದ ಬಾಧ್ಯತೆ ರಾಮಶರ್ಮರ ಏಕೈಕ ಕುಮಾರರಲ್ಲೇ ಇರುವುದೆಂದು ನಂಬಿದ್ದೇವೆ" ಎಂದನು.

ಕೃಷ್ಣಶರ್ಮನು ಸ್ವಲ್ಪ ಹೊತ್ತಿನಲ್ಲಿ ದುಃಖವನ್ನು ನುಂಗಿಕೊಂಡು, ಸ್ನಾನಮಾಡಿ ಬಂದು ಮನೆಯ ಬಾಗಿಲಲ್ಲೇ ಉತ್ತರ ದಿಕ್ಕಿಗೆ ಮುಖ ಹಾಕಿ ಒಂಟಿ ಕಾಲಲ್ಲಿ ನಿಂತು ಕಣ್ಣುಮುಚ್ಚಿ ಶಿವನನ್ನು ಧ್ಯಾನಿಸುತ್ತ, ಉಪಸಂಹರಣ ಮಂತ್ರವನ್ನು ಮೂರು ಸಾರಿ ಪಠಿಸಿದನು. ಅದುವರೆಗೂ ಸುರಿದುಕೊಂಡೇ ಇದ್ದ ಮಳೆ ಒಮ್ಮೆಗೇ ನಿಂತುಹೋಯಿತು. ಜನರೆಲ್ಲಾ ಸಂತೋಷದಿಂದ ಕೂಗಿದರು.

ಮಂತ್ರಿ ಕೃಷ್ಣಶರ್ಮನಿಗೆ ತಲೆಬಾಗಿ ನಮಸ್ಕಾರ ಮಾಡಿ, "ನಾಳೆ ತುಂಬಿದ ಸಭೆಯಲ್ಲಿ ಮಹಾರಾಜರು ನಿಮ್ಮನ್ನು ನಿಮ್ಮ ತಂದೆಯವರಿಗಿಂತಲೂ ಹೆಚ್ಚಿನ ರೀತಿಯಲ್ಲಿ ಸನ್ಮಾನಿಸಲಿದ್ದಾರೆ. ನಾಳೆ ನಾನೇ ಸ್ವತಃ ಬಂದು ಆನೆಯ ಮೇಲೆ ಅಂಬಾರಿಯಲ್ಲಿ ನಿಮ್ಮನ್ನು ರಾಜಾಸ್ಥಾನಕ್ಕೆ ಕರೆದುಕೊಂಡು

ಹೋಗುತ್ತೇನೆ" ಎಂದು ಹೇಳಿ ಹೊರಟುಹೋದನು. ಮರುದಿನ ಬೆಳಿಗ್ಗೆ ಮಂತ್ರಿ ಆನೆಯ ಅಂಬಾರಿಯೊಂದಿಗೆ, ರಾಜಲಾಂಛನ ಸಹಿತ, ಪರಿವಾರ ಸಮೇತನಾಗಿ ಬಂದಾಗ ಕೃಷ್ಣಶರ್ಮನ ಮನೆಗೆ ಬೀಗ ಹಾಕಿರುವುದನ್ನು ನೋಡಿದನು, ಎಲ್ಲಿಗೆ ಹೋದರೆಂದು ಯಾರಿಗೂ ತಿಳಿಯದು. ಮಂತ್ರಿಗೆ ಬಹಳ ಆಶ್ಚರ್ಯವೂ ವ್ಯಾಕುಲವೂ ಆಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಕೃಷ್ಣಶರ್ಮನು ರಾಜಸನ್ಮಾನವನ್ನು ನಿರಾಕರಿಸಿ, ಮನೆಬಿಟ್ಟು, ಎಲ್ಲಿಗೋ ಹೊರಟುಹೋಗಲು ಕಾರಣವೇನು? ಅವನ ತಂದೆ ಎಷ್ಟೋ ಶ್ರಮಪಟ್ಟು ಸಾಧಿಸಿಕೊಂಡು ಬಂದ ಮಂತ್ರಶಕ್ತಿ ಈಗ ಅವನ ಸ್ವಾಧೀನದಲ್ಲಿದೆಯಷ್ಟೆ? ರಾಜನು ಕೊಡುವ ಧನದಿಂದ ಅವನು ನಗರದಲ್ಲೇ ಇದ್ದು ಸುಖವಾಗಿ ಬದುಕಿಕೊಂಡಿರಬಹುದಿತ್ತಲ್ಲವೆ? ಧನವು ಬಂದರೆ ತಂದೆಯ ಹಾಗೆ ತಾನು ಕೂಡಾ ಪ್ರಾಣಾಪಾಯಕ್ಕೆ ಬೀಳುವೆನೆಂದು ಕೃಷ್ಣಶರ್ಮನು ಹೆದರಿದನೇನು? ಅಥವಾ ಬೇರೆ ಏನಾದರೂ ಕಾರಣವಿದೆಯೆ? ಈ ಸಂದೇಹಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಪುಡಿಪುಡಿಯಾಗುತ್ತದೆಂದು ತಿಳಿ!" ಎಂದು ಸುಮ್ಮನಾಯಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಕೃಷ್ಣಶರ್ಮನ ಮನಸ್ಸು ತಂದೆಯಂತಹುದಲ್ಲ. ಇರುವುದರಲ್ಲೇ ತೃಪ್ತಿ ಕಾಣುವ ಮನಸ್ಸು ಅವನದು. ಆ ಸಂಗತಿ ಅವನು ತಂದೆಯೊಡನೆ ಹೇಳಿದ ಮಾತಿನಿಂದ ಗೊತ್ತಾಗುತ್ತದೆ. ಧನದ ಮೇಲೆ ಆಶೆ ಇರಿಸಿಕೊಂಡಿದ್ದ ರಾಮಶರ್ಮನು ಹತ್ಯಕ್ಕೆ ಒಳಗಾದುದಕ್ಕೂ ಕೃಷ್ಣಶರ್ಮನು ಮನೆಬಿಟ್ಟು ಹೋದುದಕ್ಕೂ ಭಯದ ಕಾರಣವೇನಿಲ್ಲ. ತಂದೆಯಿಂದ ಮಂತ್ರೋಪದೇಶ ಪಡೆದ ಕೃಷ್ಣಶರ್ಮನು ಎಂದಿಗಾದರೂ ಇತರರ ಉಪಯೋಗಕ್ಕಾಗಿಯೇ ಅದನ್ನು ವಿನಿಯೋಗಿಸುವವನು. ಇನ್ನು ಅದರ ಅಗತ್ಯವು ವೈಶಾಲೀ ನಗರಕ್ಕೆ ಇಲ್ಲ. ಹದ್ದು ಮೀರಿ ಧನ ಸಂಪಾದಿಸುವ ಆಶೆ ಇಲ್ಲದ ಅವನಿಗೆ ಕಳ್ಳರ ಭಯಕ್ಕೂ ಕಾರಣವಿಲ್ಲ. ಬೇಕಾದುದಕ್ಕಿಂತ ಹೆಚ್ಚು ತಿಂದರೆ ಅಜೀರ್ಣವಾಗುವ ಹಾಗೆ, ತನ್ನ ಸ್ಥಿತಿಗೆ ತಾಳಲಾಗದಷ್ಟು ಧನವು ಬಂದರೆ ತೊಂದರೆಗಳು ಬರುವುದೆಂದುಕೊಂಡೇ ಅವನು ರಾಜ ಸನ್ಮಾನವನ್ನು ನಿರಾಕರಿಸಿ ಹೊರಟುಹೋದನು. ತಂದೆಯ ಕೊಲೆ ಅವನಿಗೊಂದು ಪಾಠದ ಹಾಗೆ ಆಗಿದೆ, ಅಷ್ಟೇ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ, ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ವೈದ್ಯನ ಆತುರ

ಅನಂತಾಚಾರ್ಯನೆಂಬ ಒಬ್ಬ ವೈದ್ಯನು ತನ್ನ ಮಗಳಿಗೆ ಮದುವೆಯ ವಿಷಯವಾಗಿ ಪಕ್ಕದ ಊರಿಗೆ ಹೋದನು. ಅಲ್ಲಿ ಅವನಿಗೆ ಅವನ ಊರಿನವನೊಬ್ಬನು ಕಾಣಿಸಿ, ಅವನ ಊರಿನ ಧನಿಕ ಭೂಪೇಂದ್ರರು ಜ್ವರದಿಂದ ಮುಚ್ಚಿದ ಕಣ್ಣು ತೆರೆಯದ ಸ್ಥಿತಿಯಲ್ಲಿರುವ ಸಂಗತಿಯನ್ನು ಹೇಳಿದನು.

ಕೂಡಲೇ ಅನಂತಾಚಾರ್ಯನು ತೊಟ್ಟ ಕೆಲಸ ಅಷ್ಟಕ್ಕೇ ಬಿಟ್ಟು, ಬಾಡಿಗೆ ಕೂಡಾ ಮಾತಾಡದೆ ಕುದುರೇ ಗಾಡಿಯಲ್ಲಿ ಏರಿ, ತನ್ನ ಊರಿಗೆ ಬಂದು, ಬಂಡಿಯವನು ಕೇಳಿದ ಬಾಡಿಗೆಯನ್ನು ಕೊಟ್ಟು ಬೇಗ ಬೇಗನೇ ಕಡುವಿನ ಹತ್ತಿರ ಬಂದನು.

ಹೊಳೆಯಲ್ಲಿ ನೆರೆ ಬಂದುದರಿಂದ, ದೋಣಿಯವನು ಬಿಡಲಾರೆನೆಂದರೂ ಕೇಳದೆ ಅವನಿಗೆ ಹೆಚ್ಚಿಗೆ ದುಡ್ಡಿನ ಆಶೆ ಹಚ್ಚಿ ಅಂತೂ ನದಿ ದಾಟಿ ಊರಿಗೆ ಮುಟ್ಟಿದನು.

ಮನೆಗೆ ಬರುತ್ತಲೇ ಬೇಗ ಬೇಗ ಮದ್ದಿನ ಪೆಟ್ಟಿಗೆ ಎತ್ತಿಕೊಂಡು ಓಡುತ್ತಾ ಭೂಪೇಂದ್ರನ ಮನೆಗೆ ಹೋದನು.

ನರಳುತ್ತಾ ಮಲಗಿರುವ ಭೂಪೇಂದ್ರನ ಬಾಯಿಗೆ ಕಷಾಯ ಕುಡಿಸಿದನು. ಆಮೇಲೆ ಎಷ್ಟು ಅವಸರವಾಗಿ ಬಂದಿದ್ದನೋ ಅಷ್ಟೇ ಅವಸರವಾಗಿ ಪಕ್ಕದ ಊರಿಗೂ ಹಿಂದಿರುಗಿದನು.

ಇದನ್ನೆಲ್ಲ ನೋಡಿ ಆ ಊರಿನ ಕೆಲವರು "ವೈದ್ಯಾಚಾರ್ಯರೇ, ನಿಮ್ಮಂಥ ವೈದ್ಯರು ಈ ಕಾಲದಲ್ಲಿ ಯಾರೂ ಇರಲಿಕ್ಕಿಲ್ಲ. ನಿಮಗೆ ರೋಗಿಗಳ ಮೇಲಿರುವ ಶ್ರದ್ಧೆಯೂ ಗೌರವವೂ ಅಪೂರ್ವವೇ ಸರಿ !" ಎಂದು ಹೊಗಳ ತೊಡಗಿದರು.

ಆಚಾರ್ಯರು ತಲೆ ದೂಗುತ್ತ, "ಈ ಶ್ರದ್ಧೆ ಗೌರವಗಳೆಲ್ಲ ಹೇಗಾದರಿರಲಿ. ನಾನು ಅವಸರವಾಗಿ ಹೋಗಿ ಕೊಡುವ ಮದ್ದು ಏನೋ ಕೊಡದೇ ಹೋದರೆ ನಮ್ಮ ಭೂಪೇಂದ್ರರಿಗೆ ಯಾವ ಮದ್ದೂ ಇಲ್ಲದೆಯೇ ಗುಣವಾಗಿ ಬಿಡುತ್ತದೆ. ಈ ಮೊದಲು ಎರಡು ಸಾರಿ ಹಾಗಾಗಿದೆ. ಈಗ ಬೇಗನೆ ಹೋಗಿ ಮದ್ದು ಕೊಟ್ಟೇ ಬಂದುದರಿಂದ, ನನ್ನ ಮದ್ದಿನಿಂದಲೇ ಗುಣವಾದ ಹಾಗೆ ಆಗುತ್ತದೆ. ಆಮೇಲೆ ವೈದ್ಯಮಾಡಿದ್ದಕ್ಕೆ ಅವರ ಹತ್ತಿರ ಹಣ ಕೇಳಲು ಆತಂಕವೇನಿಲ್ಲವಷ್ಟೇ ?" ಎಂದನು.





# ದೇವರಿಗೆ ಪರೀಕ್ಷೆ

ಒಂದಾನೊಂದು ಊರಿನಲ್ಲಿ ಒಬ್ಬ ದೊಡ್ಡ ದೈವ ಭಕ್ತನಿದ್ದನು. ಅವನು ಸ್ವಾರ್ಥ ಮಾತ್ರದ ಭಕ್ತನಲ್ಲ. ಅವನು ಊರೂರು ತಿರುಗುತ್ತ ಜನರಿಗೆ ದೇವರ ಮಹಿಮೆಗಳನ್ನು ಕುರಿತು ವಿವರಿಸುತ್ತ ಚೆನ್ನಾಗಿ ಬೋಧಿಸುತ್ತಿದ್ದನು.

ಹೀಗೆ ಬೋಧನೆಯ ಮೂಲಕ ಭಕ್ತಿಯನ್ನು ಹರಡಿಸುತ್ತ ಒಂದು ದಿನ ಆ ದೈವಭಕ್ತನು ರಾಮನ ಪಾಳ್ಯವೆಂಬ ಗ್ರಾಮಕ್ಕೆ ಬಂದು ಅಲ್ಲಿಯ ಜನರಿಗೆ ಈ ವಿಧವಾಗಿ ಉಪನ್ಯಾಸ ಮಾಡಿದನು :

"...ದೇವರು ತಾನು ಹುಟ್ಟಿಸುವ ಪ್ರತಿ ಪ್ರಾಣಿಗೂ ಆಹಾರವನ್ನು ಸಿದ್ಧಮಾಡಿಯೇ ಇಟ್ಟಿರುತ್ತಾನೆ. ಆದ್ದರಿಂದಲೇ ಆಗಲೇ ಹುಟ್ಟಿದ ಮಗು ಕೂಡಾ ತಾಯಿಯ ಹಾಲು ಕುಡಿಯಲು ಸಾಧ್ಯವಾಗಿದೆ. ಇರುವೆಯಂತಹ ಸೂಕ್ಷ್ಮ ಪ್ರಾಣಿಗೆ ಕೂಡಾ ತಕ್ಕ ಆಹಾರ ಕೊಡುವುದನ್ನು ದೇವರು ಮರೆಯುವುದಿಲ್ಲ. ಯಾವುದೊಂದು ಜೀವಿಯನ್ನೂ ದೇವರು ಹೊಟ್ಟೆಗಿಲ್ಲದೆ ಸಾಯಿಸುವುದಿಲ್ಲ. ತನ್ನಲ್ಲೇನೂ ಇಲ್ಲದ ಸ್ಥಿತಿಯಲ್ಲಿ ಕೂಡಾ ಹೇಗೋ ಒಂದು ವಿಧವಾಗಿ ತಿನ್ನಲು ಕೊಡಿಸುವನು. ತಿಂಡಿ ತಿನ್ನದೆ ಸಾಯುವೆನೆಂದು ಹಟ ಹಿಡಿದರೂ ಆಯುಷ್ಯವಿರುವವರೆಗೆ ಬದುಕುವ ಹಾಗೆ ಏನಾದರೂ ತಿನ್ನಿಸುತ್ತಾ ಇರುತ್ತಾನೆ ಆ ಭಗವಂತ. ಇದರಲ್ಲಿ ಯಾರೂ ಸಂದೇಹ ಪಡಬೇಕಾಗಿಲ್ಲ..."

ಈ ವಿಧವಾಗಿ ಆ ಭಕ್ತನು ಉಪನ್ಯಾಸ ಮಾಡಿಕೊಂಡಿರುವಾಗ ಜನರು ಆತ್ಮಾನಂದದಿಂದ ತಲೆ ದೂಗುತ್ತಾ ಕೇಳುತ್ತಿದ್ದರು. ಅವರಲ್ಲಿ ಸುಬ್ಬಯ್ಯನೆಂಬೊಬ್ಬ ಮೊಂಡುಗಾರನಿದ್ದ. ಅವನಿಗೆ ಆ ಉಪನ್ಯಾಸವು ಹಿಡಿಸಲಿಲ್ಲ. ಅವನು ಜನರ ಮಧ್ಯದಲ್ಲಿ ಎದ್ದು ನಿಂತು ಉಪನ್ಯಾಸಕ ಭಕ್ತನನ್ನು ನೋಡಿ, "ಸ್ವಾಮಿ, ನೀವು ಹೇಳುವುದು ನನಗೆ ವಿಚಿತ್ರವಾಗಿಯೇ ಕಾಣುತ್ತದೆ. ಯಾರಾದರೂ ಹಟ ಹಿಡಿದು ತಿನ್ನಲಾರೆ ಉಣ್ಣಲಾರೆನೆಂದು ಕುಳಿತರೆ ದೇವರು ಹೇಗೆ ತಿನ್ನಿಸಲು ಸಾಧ್ಯ ? ತಂದೆತಾಯಂದಿರು ಮಕ್ಕಳಿಗೆ ತಿನ್ನಿಸುವ ಹಾಗೆ ದೇವರು ಬಂದು ತಿನ್ನಿಸುವುದಿಲ್ಲವಷ್ಟೆ ? " ಎಂದು ಪ್ರಶ್ನಿಸಿದನು.

" ದೇವರಿಗೆ ಅದೇನೂ ಕಷ್ಟದ ಕೆಲಸವಲ್ಲ ಅಪ್ಪಾ ! ಅಂಥವನಿಗೆ ಹೇಗೆ ತಿನ್ನಿಸಬೇಕೆಂಬುದೆಲ್ಲ ಅವನಿಗೇ ಗೊತ್ತು. ಹೇಗೋ ಒಂದು ರೀತಿಯಲ್ಲಿ ತಿನ್ನಿಸದೆ ಮಾತ್ರ ಬಿಡಲಾರ" ಎಂದನು ಭಕ್ತ.



ಸುಬ್ಬಯ್ಯನಿಗೆ ಇವರೊಡನೆ ವಾದಿಸಿ ಪ್ರಯೋಜನವಿಲ್ಲವೆಂದು ತೋರಿತು. ಆದರೆ ಮೊಂಡುತನ ಬಿಡದೆ ತಾನು ಏನೂ ತಿನ್ನಬಾರದೆಂದು ನಿಶ್ಚಯಿಸಿಕೊಂಡನು. ಈ ಉಪನ್ಯಾಸಕರು ಹೇಳಿದ ಹಾಗೆ, ದೇವರು ತನ್ನಿಂದ ಹೇಗೆ ತಿನ್ನಿಸುತ್ತಾನೋ ನೋಡಿ ಬಿಡಬೇಕೆಂಬ ಹಟಹುಟ್ಟಿತು ಅವನಿಗೆ.

ಅವನು ಮನೆಗೆ ಹೋದ ಕೂಡಲೇ ಹೆಂಡತಿ ಮಣೆ ಹಾಕಿ ಬಟ್ಟಲಿಟ್ಟು ಬಡಿಸುತ್ತ ಊಟಕ್ಕೆ ಬನ್ನಿರೆಂದು ಕರೆದಳು.

"ನನಗೆ ಸ್ವಲ್ಪವೂ ಹಸಿವಿಲ್ಲ. ಊಟ ತಿಂಡಿ ಏನೂ ಬೇಡ. ಒತ್ತಾಯಿಸ ಬೇಡ" ಎಂದನು ಸುಬ್ಬಯ್ಯ ಬೇಸರದಿಂದ.

"ನಮ್ಮ ಗಿಡದಲ್ಲಿ ಒಳ್ಳೆಯ ಹಾಗಲಕಾಯಿ ಆಗಿತ್ತು. ಹುಳಿಬೆಲ್ಲದ ಪಲ್ಯ ಮಾಡಿದ್ದೇನೆ. ನಿಮಗೆ ಇಷ್ಟ ತಾನೇ ? ಸ್ವಲ್ಪವಾದರೂ ಉಣ್ಣಿರಿ, ಬನ್ನಿ" ಎಂದಳು ಹೆಂಡತಿ.

"ಹಸಿವಿಲ್ಲವೆಂದು ಒಂದು ಸಾರಿ ಹೇಳಿದರೆ ಸಾಲದೇನು ? ಏನಿದು ನಿನ್ನ ಒಯ್ಯಾರದ ಬಲವಂತ ! ಪಲ್ಯಗಿಲ್ಯ ಯಾವುದೂ ಬೇಡ !" ಎಂದು ಹೆಂಡತಿಯ ಮೇಲೆ ರೇಗಿಬಿದ್ದನು ಸುಬ್ಬಯ್ಯ.

ಮಕ್ಕಳು ಊಟಕ್ಕೆ ಕುಳಿತು, ತಾವು ತಿನ್ನುವುದನ್ನು ಬಲವಂತದಿಂದ ಸುಬ್ಬಯ್ಯನ ಬಾಯಿಗೆ ಇಡಲು ಬಂದರು.

ಮನೆಯಲ್ಲಿದ್ದರೆ ತನ್ನ ದೀಕ್ಷೆ ಸಾಗಲಾರದೆಂದುಕೊಂಡು, ಸುಬ್ಬಯ್ಯ ಮನೆಯಿಂದ ಹೊರಗೆ ಹೊರಟು ಊರಿನ ಮೇರೆಗೆ ಹೋದನು. ಅಲ್ಲಿದ್ದ ದೊಡ್ಡದೊಂದು ಮರದ ಕೆಳಗೆ ಕುಳಿತನು, ರಾತ್ರಿಯನ್ನು ಅಲ್ಲೇ ಕಳೆದುಬಿಡೋಣವೆಂಬ ನಿಶ್ಚಯದಲ್ಲಿ.

ಆ ದಿನ ಆ ಊರಿನ ಒಂದು ಮನೆಯಲ್ಲಿ ಒಬ್ಬಳಿಗೆ ಭೂತ ಬಡಿದಿತ್ತು. ಅಲ್ಲಿಗೆ ಭೂತಮಾಂತ್ರಿಕನು ಬಂದು ಏನೇನೋ ಮಂತ್ರ ಪಠಿಸಿ, ಭಕ್ಷ್ಯ ಭೋಜ್ಯಗಳ ನೈವೇದ್ಯ ಮಾಡಿ, ಅದನ್ನೆಲ್ಲ ಒಂದು ಮಡಿಕೆಯೊಳಗೆ ತುಂಬಿಸಿ, ಅದನ್ನು ಊರ ಹೊರಗಿದ್ದ ಆಲದಮರದ ಬುಡದಲ್ಲಿ ಇಟ್ಟು, ಹಿಂದಿರುಗಿ ನೋಡದೆ ಬರಬೇಕೆಂದು ಹೇಳಿದನು.

ಆ ಮನೆಯ ಆಳುಗಳು, ಸುಬ್ಬಯ್ಯ ಕುಳಿತಿದ್ದ ಮರಕ್ಕೆ ಸ್ವಲ್ಪ ಆಚೆಯಲ್ಲಿರುವ ಆಲದ ಮರದ ಬುಡದಲ್ಲಿ ಆ ಗಡಿಗೆಯನ್ನಿಟ್ಟು, ಹಿಂದಿರುಗಿ ನೋಡದೆ ಹೊರಟು ಹೋಗಿಬಿಟ್ಟರು.

ನಿಜಕ್ಕೂ ಸುಬ್ಬಯ್ಯನಿಗೆ ಹಸಿವೆಯಾಗುತ್ತಲೇ ಇದ್ದಿತು. ಗಾಳಿಗೆ ಹಾರಿ ಹಾರಿ ಬರುವ ಭಕ್ಷ್ಯ ಭೋಜ್ಯಗಳ ಸುವಾಸನೆಯಿಂದ ಬಾಯಿಯಲ್ಲಿ ಜೊಲ್ಲು ತುಂಬುತಿದ್ದಿತು. ಆದರೂ ದೇವರನ್ನು ಪರೀಕ್ಷಿಸಿ ಬಿಡಬೇಕೆಂದು ಅವನು ಹಸಿವನ್ನು ತಡೆದುಕೊಂಡು ಹೊಟ್ಟೆಯೊತ್ತಿ ಕುಳಿತೇ ಇದ್ದನು.

ರಾತ್ರಿ ಮುಂದುವರಿಯುತ್ತಾ ಇದ್ದಿತು. ಅರ್ಧ ರಾತ್ರಿದಾಟಿ, ಮೂರನೇ ಜಾಮವು ಕಾಲಿಟ್ಟಿತು.

ಆಗ ಪಕ್ಕದ ಊರುಗಳಲ್ಲಿ ಕಳ್ಳತನ ಮಾಡಿ ತಂದ ಸೊತ್ತುಗಳನ್ನು ಹಂಚಿಕೊಳ್ಳಲು, ಕೆಲವರು ಕಳ್ಳರು ಅಲ್ಲಿಗೇ ಬಂದರು.

ಅವರ ಮೂಗಿಗೂ ಭಕ್ಷ್ಯಭೋಜ್ಯಗಳ ಸುವಾಸನೆ ಹೊಡೆಯತೊಡಗಿತು. ಅಲ್ಲಿದ್ದ ಗಡಿಗೆಯನ್ನು ನೋಡಿ ಬೆರಗಾದರು.

"ಎಲ! ಹಬ್ಬದಡಿಗೆಯ ಊಟ ಇಲ್ಲಿಗೆ ಹೇಗೆ ಬಂತು? ಇಲ್ಲಿ ಹತ್ತಿರದಲ್ಲೆಲ್ಲೂ ಮನೆಗಳೇ ಇಲ್ಲವಲ್ಲ!" ಎಂದರು ಕೆಲವರು ಕಳ್ಳರು.

"ಹೇಗೆ ಬಂದರೆ ಏನಾಯಿತು ಬಿಡ್ರೋ! ಹಸಿವೆ ಭಗಭಗಿಸುವಾಗ ತಿನ್ನೋದು ಬಿಟ್ಟು! ಸುಮ್ಮನೆ ಸಂದೇಹವೇಕೆ?" ಎಂದರು ಮತ್ತೆ ಕೆಲವರು.

"ದುಡುಕಬೇಡ್ರೋ! ನಮ್ಮನ್ನು ಕೊಂದು ನಮ್ಮ ಸೊತ್ತು ಅಪಹರಿಸಲಿಕ್ಕೆ ಯಾವ ಕ್ರೂರ ಬುದ್ಧಿಯವನೋ ವಿಷಬೆರೆಸಿ ಇಟ್ಟಿರಲೂ ಬಹುದು. ಅಂಥವರಿದ್ದರೆ ಹತ್ತಿರದಲ್ಲೇ ಅಡಗಿರುತ್ತಾರೆ, ಮೊದಲು ಸುತ್ತಲೂ ಚೆನ್ನಾಗಿ ಹುಡುಕಿರಿ" ಎಂದನೊಬ್ಬ ಕಳ್ಳ.

ಕಳ್ಳರು ಬೇಗದಲ್ಲೇ ಸ್ವಲ್ಪದೂರ ಮರದ ಕೆಳಗೆ ನಿಶ್ಚಲನಾಗಿ ಕುಳಿತಿದ್ದ ಸುಬ್ಬಯ್ಯನನ್ನು ನೋಡಿದರು.

ಎಲ್ಲಾ ಕಳ್ಳರೂ ಓಡಿಬಂದು ಸುಬ್ಬಯ್ಯನ ಸುತ್ತಲೂ ಕೂಡಿ, "ಕಳ್ಳ ಮಂಗಾ! ನಮ್ಮನ್ನು ಕೊಂದು ನಮ್ಮ ಹಣ ಹೊಡೆದುಕೊಳ್ಳಬೇಕೆಂದು ಕತ್ತಲೆಯಲ್ಲಿ ಹೊಂಚು ಹಾಕಿ ಕುಳಿತಿದ್ದೀಯಾ! ತಿನ್ನು ನಿನ್ನ ವಿಷದ ತಿಂಡಿ! ಭಡವಾ!" ಎಂದರು.

"ಆ ತಿಂಡಿ ಗಿಂಡಿ ಯಾವುದೂ ನನಗೆ ಗೊತ್ತಿಲ್ಲಯ್ಯಾ. ಒಂದು ಕಾರಣದಿಂದ ನಾನು ಉಪವಾಸ ದೀಕ್ಷೆ ಹಿಡಿದು ಇಲ್ಲಿ ಕುಳಿತಿದ್ದೇನೆ. ಏನೂ ತಿನ್ನಲಾರೆ!" ಎಂದನು ಸುಬ್ಬಯ್ಯ.

ಎಷ್ಟು ಮಾತ್ರಕ್ಕೂ ತಿನ್ನಲಾರೆನೆಂದು ಸುಬ್ಬಯ್ಯ ಮೊಂಡುತನ ಮಾಡುವುದನ್ನು ನೋಡಿ, ಕಳ್ಳರ ಅನುಮಾನ ದೃಢವಾಯಿತು.

ಅವರು ಸುಬ್ಬಯ್ಯನನ್ನು ಹೊಡೆದು ಗುದ್ದಿ, ಬಲವಂತದಿಂದ ಗಡಿಗೆಯಲ್ಲಿದ್ದ ಭೋಜ್ಯದ ಕೆಲವು ತುತ್ತುಗಳನ್ನು ಅವನಿಂದ ನುಂಗಿಸಿದರು. ಸುಬ್ಬಯ್ಯ ತಿನ್ನಲೇ ಬೇಕಾಯಿತು.

ಅವುಗಳನ್ನು ತಿಂದು ಸುಬ್ಬಯ್ಯ ಸಾಯದಿರುವುದನ್ನು ನೋಡಿ, ಕಳ್ಳರು ಮತ್ತೆ ಅವನಿಗೆ ತಿನ್ನಿಸುವುದನ್ನು ನಿಲ್ಲಿಸಿ, ಗಡಿಗೆಯೊಳಗೆ ಇದ್ದುದನ್ನೆಲ್ಲಾ ತಾವೇ ತಿಂದು ಮುಗಿಸಿ, ತಮ್ಮ ದಾರಿ ಹಿಡಿದು ಹೊರಟು ಹೋದರು.

ದೇವರೇ ಗೆದ್ದನೆಂದುಕೊಂಡು ಸುಬ್ಬಯ್ಯ ಕತ್ತಲೆಯಲ್ಲಿ ಮನೆಗೆ ಹಿಂದಿರುಗಿ, ಉಳಿದ ಹೊಟ್ಟೆಯನ್ನು ತುಂಬಿಸಿಕೊಂಡನು, ಹೆಂಡತಿಗೆ ಆಶ್ಚರ್ಯ!







# ಕನಸುಗಳ ಅರ್ಥ

ಹಿಂದೆ ಕೋಸಲ ದೇಶದ ರಾಜನಾದ ಬಿಂಬಿಸಾರ ಮಹಾರಾಜನಿಗೆ ಒಂದು ದಿನ ರಾತ್ರಿ ಒಂದರ ಮೇಲೊಂದಾಗಿ ಅನೇಕ ಕನಸುಗಳು ಬಿದ್ದುವು. ಎಚ್ಚರಾದರೂ ಅವೆಲ್ಲ ಸ್ಪಷ್ಟವಾಗಿ ನೆನಪಿನಲ್ಲಿದ್ದುವು. ಎಲ್ಲವೂ ವಿಚಿತ್ರ ಕನಸುಗಳೇ.

ಮಹಾರಾಜನು ಬ್ರಾಹ್ಮಣರನ್ನು ಕರೆಯಿಸಿ ತನಗೆ ಬಂದ ಕನಸುಗಳನ್ನೆಲ್ಲಾ ಅವರೊಂದಿಗೆ ಹೇಳಿ, "ಇಂತಹ ಚಿತ್ರವಿಚಿತ್ರ ಸ್ವಪ್ನಗಳಿಗೆ ಏನು ಅರ್ಥವೋ, ಅದಕ್ಕೆ ಏನು ಮಾಡಬೇಕೋ ಆಲೋಚಿಸಿ ಹೇಳಿರಿ" ಎಂದು ಅಪೇಕ್ಷಿಸಿದನು.

ಬ್ರಾಹ್ಮಣರು ತಮ್ಮೊಳಗೆ ತಾವು ಮಾತಾಡಿಕೊಂಡರು. ರಾಜನಿಂದ ತಮ್ಮ ಇಷ್ಟಪ್ರಕಾರ ಧನವನ್ನು ಎಳೆದುಕೊಳ್ಳಲಿಕ್ಕೆ ಇದೊಂದು ಒಳ್ಳೆಯ ಅವಕಾಶವಾಗಿ ಅವರಿಗೆ ತೋರಿತು. ಇದನ್ನು ಕಳೆದುಕೊಳ್ಳಬಾರದೆಂದು ಎಲ್ಲರೂ ಒಗ್ಗಟ್ಟಾಗಿ ನಿಶ್ಚಯಿಸಿಕೊಂಡರು.

ಆಮೇಲೆ ಬ್ರಾಹ್ಮಣರು ರಾಜನ ಬಳಿಗೆ ಹೋಗಿ, "ಮಹಾರಾಜರೇ, ಎಷ್ಟೋ ಗ್ರಂಥಗಳನ್ನು ಪರೀಕ್ಷಿಸಿ ನೋಡಿದೆವು. ನಿಮಗೆ ಬಂದ ಕನಸುಗಳು ಬಹು ಕೆಟ್ಟ ಅರಿಷ್ಟಕಾರಿಗಳಾಗಿವೆ. ಅವುಗಳಿಂದ ನಿಮಗೂ, ನಿಮ್ಮ ವಂಶಕ್ಕೂ, ರಾಜ್ಯಕ್ಕೂ, ಪ್ರಜೆಗಳಿಗೂ ಅನೇಕ ಕೇಡುಕುಗಳಿವೆ" ಎಂದರು.

ಆ ಮಾತುಗಳನ್ನು ಕೇಳಿ ರಾಜನು ಬಹಳವಾಗಿ ಹೆದರಿದನು. "ಹಾಗಾದರೆ ಈ ಅರಿಷ್ಟಗಳನ್ನೆಲ್ಲ ನಿವಾರಿಸುವ ದಾರಿ ಏನೂ ಇಲ್ಲವೇ? ಪರಿಹಾರಗಳಿಗೂ ಶಾಂತವಾಗಲಾರವೇ? ಅನುಭವಿಸಲೇ ಬೇಕಾದ್ದೇನಾ?" ಎಂದು ಕೇಳಿದನು.

"ಅದನ್ನೂ ನೋಡಿ ನಿರ್ಣಯಿಸಿಕೊಂಡೇ ಬಂದಿದ್ದೇವೆ. ಇದಕ್ಕೆಲ್ಲಾ ಸೇರಿ ಒಂದೇ ಪರಿಹಾರ ಮಾರ್ಗವಿದೆ. ನಮ್ಮ ರಾಜ್ಯದಲ್ಲಿ ನಾಲ್ಕು ದಾರಿಗಳು ಎಲ್ಲೆಲ್ಲಿ ಕೂಡುವುವೋ ಅಲ್ಲೆಲ್ಲಾ ಒಂದು ಯಜ್ಞ ಮಾಡಿಸಬೇಕು. ಯಜ್ಞ ಮುಗಿದ ಮೇಲೆ ಬ್ರಾಹ್ಮಣ ಸಂತರ್ಪಣೆ, ದಾನ ಧರ್ಮಗಳೂ ನಡೆಯಬೇಕು. ಆದರಿಂದ ಎಲ್ಲಾ ಪೀಡೆಗಳೂ ಪರಿಹಾರವಾಗಿ ಹೋಗುತ್ತವೆ. ರಾಜ್ಯವೂ ಹೊಸ ಚೈತನ್ಯದಿಂದ ಅಭಿವೃದ್ಧಿಗೇರುತ್ತದೆ. ಇದರಲ್ಲಿ ದಾನಧರ್ಮಗಳೇ ಬಹಳ ಮುಖ್ಯವಾದಂಥವು" ಎಂದು ಬ್ರಾಹ್ಮಣರು ಹೇಳಿದರು.

ಬಿಂಬಿಸಾರ ಮಹಾರಾಜನು ಹಿಂದು ಮುಂದು ಯೋಚಿಸದೆ, ಬ್ರಾಹ್ಮಣರು ಹೇಳಿದುದನ್ನು ಪೂರ್ತಿ ನಂಬಿ, ತನ್ನ ಕೋಶಾಧಿಕಾರಿಯನ್ನು ಕರೆದು, "ನಾಲ್ಕು ದಾರಿಗಳು ಕೂಡುವ ಸ್ಥಳದಲ್ಲೆಲ್ಲಾ ಯಜ್ಞ ನಡೆಸಬೇಕಾಗಿದೆ. ಆಗ ಸಂತರ್ಪಣೆ, ಸಂಭಾವನೆ ದಾನಾದಿಗಳೆಲ್ಲಾ ನಡೆಯಬೇಕು. ಅದಕ್ಕೆ ಬೇಕಾದ ಸನ್ನಾಹಗಳನ್ನು ಪ್ರಾರಂಭಿಸು. ದಾನಗಳು ಕಡಿಮೆ ಯಾಯಿತೆಂಬ ಮಾತೇ ಬರಬಾರದು. ಜಾಗ್ರತೆ!" ಎಂದು ಆಜ್ಞೆ ಮಾಡಿದನು.

ಈ ಸಮಾಚಾರ ಮಹಾರಾಣಿಗೆ ಗೊತ್ತಾಯಿತು. ಅವಳು ತನ್ನ ಗಂಡನ ಬಳಿಗೆ ಹೋಗಿ, "ಇದೇನು ಮಾಡುವಿರಿ? ನೀವು ಅವಸರಪಟ್ಟು ಈ ಯಜ್ಞ ಗಳನ್ನು ಪ್ರಾರಂಭಿಸಬಾರದು. ನಿಜಕ್ಕೂ ಈ ಬ್ರಾಹ್ಮಣರು ಅಷ್ಟೆಲ್ಲ ತಿಳಿದವರೆಂದು ನಂಬಿಬಿಡ ಬಾರದು. ಅವರು ಹೇಳಿದ ರೀತಿ ನೋಡುವಾಗ ನನಗೆ ಸಂದೇಹವಾಗುತ್ತದೆ. ಮುಖ್ಯರಾದವರೊಡನೆ ವಿಚಾರಿಸಬೇಕು. ಎಲ್ಲರೂ ಒಪ್ಪಿಕೊಂಡಂತೆ ಎಲ್ಲಾ ಬಲ್ಲ ಮಹಾಜ್ಞಾನಿ ಬುದ್ಧ ಭಗವಾನ್ ಜೇತವನ ದಲ್ಲಿರುವುದನ್ನು ಮರೆತಿರಾ? ನೀವು ಅಲ್ಲಿಗೆ ಹೋಗಿ ಆ ಮಹಾನುಭಾವನೊಂದಿಗೆ ನಿಮಗೆ ಬಂದ ಸ್ವಪ್ನ ವನ್ನೆಲ್ಲಾ ಹೇಳಿ ಫಲಿತವೇನೆಂದು ಕೇಳಿರಿ. ಆತನೂ ಯಜ್ಞ ಮಾಡಲು ಹೇಳಿದರೆ ಮಾಡಬಹುದು" ಎಂದು ಸಲಹೆ ಮಾಡಿದಳು.

ಇದು ಒಳ್ಳೆಯ ಆಲೋಚನೆಯೆಂದು ಬಿಂಬಿಸಾರ ಮಹಾರಾಜನಿಗೆ ತೋರಿತು. ಅಂತೆಯೇ ಅವನು ಸ್ವತಃ ಜೇತವನಕ್ಕೆ ಹೋಗಿ ಬುದ್ಧ ಭಗವಾನನನ್ನು ತನ್ನ ಮನೆಗೆ ಭಿಕ್ಷೆಗೆ ಬರಬೇಕೆಂದು ತುಂಬಾ ವಿನೀತ ನಾಗಿ ಆಹ್ವಾನಿಸಿದನು.

ಬುದ್ಧನು ರಾಜನ ಕೋರಿಕೆಯಂತೆ ಅವನು ಕರೆದ ದಿನ ಭಿಕ್ಷೆ ಸ್ವೀಕರಿಸಲು ರಾಜಧಾನಿಗೆ ಬಂದನು. ಆಗ ಮಹಾರಾಜನು ಬುದ್ಧ ಭಗವಾನನೊಂದಿಗೆ,



"ಸ್ವಾಮಿ, ನಿಮಗೆ ತಿಳಿಯದಿರುವ ರಹಸ್ಯವಾವುದೂ ಇರಲಾರದು. ನನಗೆ ಕೆಲವು ಕೆಟ್ಟ ಕೆಟ್ಟ ಸ್ವಪ್ನಗಳು ಬಂದಿವೆ. ಅವುಗಳಿಂದಾಗುವ ದುಷ್ಫಲಿತಗಳು ಏನೆಂಬುದನ್ನು ತಾವು ತಿಳಿಯಪಡಿಸಬೇಕೆಂದು ನನ್ನ ಪ್ರಾರ್ಥನೆ" ಎಂದನು.

"ಆ ಕನಸುಗಳು ಏನೆಂಬುದನ್ನು ಹೇಳಿದರೆ ಫಲ ಗಳನ್ನು ಹೇಳುತ್ತೇನೆ. ಅದಕ್ಕೇನೂ ಕಷ್ಟವಿಲ್ಲ" ಎಂದನು ಬುದ್ಧ. ರಾಜನ ಮುಗ್ಧ ಭಾವನೆಗೆ ಬುದ್ಧನಿಗೆ ಮುಗುಳು ನಗುಬಂತು.

"ಮೊದಲು ನಾನು ಕನಸಿನಲ್ಲಿ ನಾಲ್ಕು ಗೂಳಿ ಗಳನ್ನು ಕಂಡೆನು. ಅವು ಭೀಕರವಾಗಿ ರಂಕೆ ಹಾಕುತ್ತ ರಾಜಸೌಧದ ಆವರಣದೊಳಗೆ ಬಂದುವು. ಅವು ಗಳು ಪರಸ್ಪರ ಜಗಳಾಡಿದರೆ ನೋಡಿ ಸಂತೋಷ ಪಡೋಣವೆಂದು ಜನರು ಗುಂಪುಗುಂಪಾಗಿ ಬಂದರು. ಆದರೆ ಆ ಗೂಳಿಗಳು ಜಗಳಾಟಕ್ಕಿಳಿಯದೆ, ಅವುಗಳ ಪಾಡಿಗೆ ಎಲ್ಲಿಗೋ ತಿರುಗಿ ಎತ್ತಲೋ ಹೊರಟು



ಹೋದುವು. ಇದೇಕೆ ಹೀಗೆ? ಇದರ ಅರ್ಥವೇನು?" ಎಂದು ಮಹಾರಾಜನು ಕೇಳಿದನು.

"ರಾಜಾ, ಈ ಕನಸು ನಿನಗಾಗಲೀ, ನಿನ್ನ ತಲೆಮಾರಿನವರಿಗಾಗಲೀ ಸಂಬಂಧಿಸಿದ್ದಲ್ಲ. ಮುಂದಿನ ಯುಗಗಳಲ್ಲಿ ರಾಜರು ಪಾಪ ಕರ್ಮಿಗಳಾಗುತ್ತಾರೆ. ಮೇಘಗಳು ಬಂದು ಕೂಡಾ ಮಳೆಸುರಿಸದೆ ಹೊರಟು ಹೋಗುತ್ತವೆ. ಅವುಗಳ ಮೇಲೆ ಆಶೆಯಿಟ್ಟಿದ್ದ ಪ್ರಜೆಗಳು ನಿರಾಶರಾಗುತ್ತಾರೆ. ಅಂತಹ ದಿನಗಳು ಮುಂದೆ ಎಂದೋ ಒಂದು ಕಾಲದಲ್ಲಿ ಬರುತ್ತವೆ. ಅದಕ್ಕಾಗಿ ನೀನೇನೂ ಚಿಂತಿಸಬೇಕಾಗಿಲ್ಲ" ಎಂದನು ಬುದ್ಧ.

"ಆಮೇಲೆ ಇನ್ನೊಂದು ವಿಚಿತ್ರ ಸ್ವಪ್ನ ಸ್ವಾಮಿ. ಭೂಮಿಯಲ್ಲಿ ಹುಟ್ಟಿದ ಗಿಡಗಳು ಬೇಕಾದಷ್ಟು ಎತ್ತರಕ್ಕೆ ಬೆಳೆಯುವುದಕ್ಕೆ ಮೊದಲೇ ಹೂಬಿಟ್ಟು ಕಾಯಿಯಾಗುವುದನ್ನು ನೋಡಿದೆನು. ಇದು ಎಲ್ಲಾದರೂ ಉಂಟೇ? ಇದರ ರಹಸ್ಯವೇನು?" ಎಂದು ಮಹಾರಾಜನು ಕೇಳಲು, ಬುದ್ಧನು "ನಾನು ಈ ಮೊದಲು ಹೇಳಿದ ಪಾಪಿಷ್ಠವಾದ ಆ ಕಾಲದಲ್ಲಿ ಸ್ತ್ರೀಯರಿಗೆ ಬಾಲ್ಯ ವಿವಾಹಗಳು ನಡೆಯುತ್ತವೆ. ಅವರು ಬೆಳೆದು ದೊಡ್ಡವರಾಗುವುದಕ್ಕೆ ಮೊದಲೇ ಮಕ್ಕಳ ತಾಯಂದಿರಾಗುವರು. ಅದಕ್ಕೂ ನೀನೇನೂ ಮಾಡಲಾರೆ. ಅಷ್ಟೇ ಹೊರತು ಮತ್ತೇನಿಲ್ಲ" ಎಂದನು.

"ಹಸುಗಳು ಚಿಕ್ಕ ಚಿಕ್ಕ ಕರುಗಳ ಹೊಟ್ಟೆಗೆ ಬಾಯಿ ಹಾಕಿ ಪೀಡಿಸುತ್ತ ಹಾಲು ಕುಡಿಯುವಂತೆ ಮತ್ತೊಂದು ಸ್ವಪ್ನ ಕಂಡೆನು" ಎಂದನು ಬಿಂಬಿಸಾರ ರಾಜ.

"ಮುಂದಿನ ಕಾಲವು ತಾರುಮಾರಾಗಿ ಹೋಗುವುದರಿಂದ, ಮುದುಕರು ತಮ್ಮ ಆಹಾರಕ್ಕಾಗಿ ಚಿಕ್ಕವರನ್ನು ಹೊಂದಿಕೊಳ್ಳುವಂಥ ದುರ್ದಿನಗಳು ಬರಲಿವೆ ಎಂದು ಅದರ ಅರ್ಥ" ಎಂದನು ಬುದ್ಧ.

"ತರುವಾಯದ ಕನಸಿನಲ್ಲಿ ಕೆಲವರು ರೈತರನ್ನು ನೋಡಿದೆನು. ಅವರು ತಮ್ಮ ಹೊಲಗದ್ದೆಗಳಲ್ಲಿ ನೇಗಿಲಿಗೆ ಹೂಡಿದ ಬಲಿಷ್ಠವಾದ ಎತ್ತುಗಳನ್ನು ಬಿಚ್ಚಿ ಓಡಿಸಿ, ಎಳೆಯ ಕರುಗಳನ್ನು ಆ ನೇಗಿಲಿಗೆ ಕಟ್ಟುವುದನ್ನು ನೋಡಿದೆನು. ಕರುಗಳು ಅರಚುತ್ತಿದ್ದುವು" ಎಂದನು ಮಹಾರಾಜ.

"ನಾನು ಈ ಮೊದಲು ಹೇಳಿದಂತೆ ನ್ಯಾಯ ಮಾರ್ಗ ತಪ್ಪುವ ರಾಜರು, ಅಧಿಕಾರದಲ್ಲಿರುವ ಸುಸಮರ್ಥ ಮಂತ್ರಿಗಳನ್ನು ತೊಲಗಿಸಿ, ಪ್ರಪಂಚ ಜ್ಞಾನವೇನಿಲ್ಲದ ತರುಣರನ್ನು ಆ ಪದವಿಯಲ್ಲಿ ಇರಿಸಿಕೊಳ್ಳಲಿದ್ದಾರೆ. ಎಲ್ಲವೂ ತಿರುಗುಮುರುಗಾಗಿ ಹೋಗುತ್ತದೆಂಬುದೇ ಆ ಸ್ವಪ್ನಕ್ಕೆ ಅರ್ಥ" ಎಂದನು ಬುದ್ಧ ಭಗವಾನ್.

"ಮತ್ತೊಂದು ಕನಸಿನಲ್ಲಿ ವಿಲಕ್ಷಣವಾದ ಕುದುರೆಯನ್ನು ನೋಡಿದೆನು. ಅದಕ್ಕೆ ಎರಡು ಕಡೆಗಳಲ್ಲಿ ತಲೆಗಳಿದ್ದುವು. ಆ ಎರಡು ತಲೆಗಳ ಬಾಯಿಯಿಂದ

ಅದು ದಾಣೆ ತಿನ್ನುತ್ತಿತ್ತು. ಈ ಘೋರ ದೃಶ್ಯದ ಅರ್ಥವೇನಿರಬಹುದು ಸ್ವಾಮಿ ?" ಎಂದು ಮಹಾರಾಜನು ಪ್ರಶ್ನಿಸಿದನು.

"ಮುಂದೆ ಬರಲಿರುವ ಅನ್ಯಾಯದ ಕಾಲದಲ್ಲಿ ನ್ಯಾಯಾಧಿಕಾರಿಗಳು ನಿಷ್ಪಕ್ಷಪಾತವಾಗಿ ತಗಾದೆಗಳನ್ನು ತೀರಿಸುವುದಕ್ಕೆ ಬದಲಾಗಿ, ಎರಡು ಪಕ್ಷಗಳಿಂದಲೂ ಲಂಚಗಳನ್ನು ಮೇಯುತ್ತಾರೆಯೇ ಹೊರತು ಯಾರಿಗೂ ನ್ಯಾಯವಾದ ತೀರ್ಪು ಹೇಳಲಾರರು. ಇದೇ ಅದರ ತಾತ್ಪರ್ಯ" ಎಂದನು ಬುದ್ಧ ಭಗವಾನ್.

"ಇದೇನೆಂದು ಹೇಳಬೇಕು. ಒಬ್ಬನು ಹಗ್ಗವನ್ನು ಹೊಸೆಯುತ್ತ, ಹೊಸೆದ ಭಾಗವನ್ನು ಕೆಳಗೆ ಹಾಕುತ್ತಾ ಇದ್ದ. ಅವನಿಗೆ ಗೊತ್ತಾಗದ ಹಾಗೆ ಒಂದು ಹೆಣ್ಣು ನರಿ ಹೊಂಚಿ ಬಂದು ಹೊಸೆದ ಹಗ್ಗವನ್ನು ತಿನ್ನುತ್ತಾ ಇದ್ದಿತು. ಇದರ ಗುಟ್ಟು ಏನೋ ?" ಎಂದನು ರಾಜ.

"ಬರಲಿರುವ ಕಾಲದಲ್ಲಿ ಪಾಪವು ಹೆಚ್ಚುತ್ತಾ ಹೋಗುತ್ತದೆ, ಸಮಾಜದಲ್ಲಿ ಗಂಡಂದಿರು ಕಷ್ಟಪಟ್ಟು ಕೂಡಹಾಕಿದ ಧನವನ್ನು ಹೆಂಡಂದಿರು ಯಾವಾಗೆಂದರಾವಾಗ ಖರ್ಚು ಮಾಡುತ್ತಾ ಇರುತ್ತಾರೆ, ಅದು ಗಂಡನಿಗೆ ಗೊತ್ತಾಗವುದಿಲ್ಲ, ಪಾಪ. ಅಷ್ಟೇ" ಎಂದನು ಬುದ್ಧ.

"ಬೇರೊಂದು ವಿಚಿತ್ರ ಸ್ವಪ್ನ ನೋಡಿದೆನು. ರಾಜಭವನದ ಹತ್ತಿರವೇ ದೊಡ್ಡದೊಂದು ಬೋಗುಣಿಯ ತುಂಬಾ ನೀರಿದ್ದಿತು. ಅದರ ಸುತ್ತಲೂ ಎಷ್ಟೋ ಚಿಕ್ಕ ಚಿಕ್ಕ ಬೋಗುಣಿಗಳೂ, ಬಿಂದಿಗೆಗಳೂ ಖಾಲಿಯಾಗಿದ್ದುವು, ಅಲ್ಲಿಗೆ ಎಲ್ಲಾ ಕುಲದವರೂ ನೀರು ತೆಗೆದುಕೊಂಡು ಬಂದು, ಆಗಲೇ ತುಂಬಿರುವ ಬೋಗುಣಿಗೇ ನೀರು ಸುರಿದು, ಅದು ಕೆಳಗೆ ಬೀಳುವುದನ್ನೂ ಗಮನಿಸದೆ ಹೊರಟು ಹೋಗುತ್ತಿದ್ದರು. ಖಾಲೀ ಪಾತ್ರಗಳಲ್ಲಿ ಯಾರೂ



ನೀರು ಹೊಯ್ಯುವುದಿಲ್ಲ. ಹೀಗೆ ವ್ಯರ್ಥವಾಗಿ ನೀರು ಹೊಯ್ಯುವುದರ ಅರ್ಥ ಎಂತಹುದೋ ?" ಎಂದು ಕೇಳಿದನು ರಾಜ.

"ಮುಂದೆ ಮುಂದೆ ಅಧರ್ಮವು ಬೆಳೆಯುತ್ತದೆ, ಜನರು ಕಷ್ಟಪಟ್ಟು ಸಂಪಾದಿಸಿದ ಧನವನ್ನೆಲ್ಲಾ ರಾಜನ ಖಜಾನೆಗೇ ತುಂಬಿಸುತ್ತಾರೆ. ಇನ್ನೊಂದು ಕಡೆಯಲ್ಲಿ ಪ್ರಜೆಗಳ ಮನೆಗಳು ಖಾಲೀ ಪಾತ್ರಗಳ ಹಾಗೆ ಒಣಗಿಕೊಂಡು ಶೂನ್ಯವಾಗಿಯೇ ಇರುತ್ತವೆ" ಎಂದನು ಬುದ್ಧ.

"ಮತ್ತೊಂದು ಸ್ವಪ್ನದಲ್ಲಿ ಒಲೆಯ ಮೇಲಿನ ಗಡಿಗೆಯಲ್ಲಿ ಅನ್ನವು ಕುದಿಯುವುದನ್ನು ಕಂಡೆನು. ಆ ಪಾತ್ರವು ಒಂದೇ ಬಗೆಯಾಗಿ ಕುದಿಯುತ್ತಿರಲಿಲ್ಲ. ಒಂದು ಭಾಗದಲ್ಲಿ ಕುದಿತ ಜಾಸ್ತಿಯಾಗಿ ಅನ್ನವು ಬೆಂದು ಮಡ್ಡಿಯಾಗುತ್ತಿದ್ದರೆ, ಮತ್ತೊಂದು ಭಾಗದಲ್ಲಿ ಅಕ್ಕಿಯಕ್ಕಿಯಾಗಿಯೇ ಕಾಣುತ್ತಿತ್ತು" ಎಂದನು ಮಹಾರಾಜ.

"ಮುಂದಿನ ಕೆಟ್ಟ ಕಾಲದಲ್ಲಿ ವ್ಯವಸಾಯವು ಹೀಗೆ ಇರುತ್ತದೆಂಬುದನ್ನು ಈ ಸ್ವಪ್ನ ಹೇಳುತ್ತದೆ. ಪಾಲಕರು ನೆರೆಯನ್ನು ಕುರಿತು, ಅನಾವೃಷ್ಟಿಯನ್ನು ಕುರಿತು ತಕ್ಕ ಶ್ರದ್ಧೆ ತೆಗೆದುಕೊಳ್ಳುವುದಿಲ್ಲ. ಆದ್ದರಿಂದ ಕೆಲವು ಕಡೆ ಅತಿವೃಷ್ಟಿಯಾಗಿ ನೆರೆಬಂದು ಪೈರುಗಳು ಹಾಳಾಗುತ್ತವೆ. ಅನಾವೃಷ್ಟಿಯಾದಲ್ಲಿ ಆಸಲು ಪೈರೇ ಇರಲಾರದು" ಎಂದನು ಬುದ್ಧ ಭಗವಾನ್.

"ಸ್ವಾಮಿ, ಇನ್ನೊಂದು ಸ್ವಪ್ನದಲ್ಲಿ ಕೆಲವು ಮನುಷ್ಯರು ಅಮೂಲ್ಯವಾದ ಮಲಯಚಂದನವನ್ನು ಬೀದಿಯಲ್ಲಿ ಮಾರುತ್ತ ಹಣ ತೆಗೆದುಕೊಳ್ಳುವುದನ್ನು ನೋಡಿದೆನು" ಎಂದನು ಮಹಾರಾಜ.

"ಭವಿಷ್ಯತ್ತಿನಲ್ಲಿ ಕೆಲವರು ನೀಚರು ಪವಿತ್ರವಾದ ಧರ್ಮ ಬೋಧನೆಗಳನ್ನು ಪ್ರಜೆಗಳಿಗೆ ಕೊಟ್ಟು ತುಚ್ಛವಾದ ಐಹಿಕ ಸುಖಗಳನ್ನು ಪ್ರತಿಫಲವಾಗಿ ಪಡೆದುಕೊಳ್ಳುತ್ತಾರೆ" ಎಂದನು ಬುದ್ಧ.

"ಇನ್ನೂ ನಾನು ಕನಸಿನಲ್ಲಿ ನೀರಮೇಲೆ ಭಾರವಾದ ಕಲ್ಲು ತೇಲುತ್ತಾ, ಹೊಡೆದುಕೊಂಡು ಹೋಗುವುದನ್ನು ನೋಡಿದೆನು. ಒಂದು ರಾಜಹಂಸಗಳ ಗುಂಪು ಒಂದು ಕಾಗೆಯ ಹಿಂದೆ ನಡೆಯುತ್ತ ಹೋಗುವುದನ್ನು ಕಂಡೆನು. ಮೇಕೆಗಳು ಹುಲಿಗಳನ್ನು ಓಡಿಸಿ ಹಿಡಿದುಕೊಂಡು ತಿನ್ನುವಾಗ, ತೋಳಗಳು ಕೂಡಾ ಹೆದರಿ ನಡುಗುವುದನ್ನು ನೋಡಿದೆನು. ಇವೆಲ್ಲಾ ಅರಿಷ್ಟದಾಯಕಗಳು ಅಲ್ಲವೇನು ಸ್ವಾಮಿ?" ಎಂದು ಮಹಾರಾಜನು ಕೇಳಿದನು.

"ಈ ಸ್ವಪ್ನಗಳು ನಿನಗಾಗಲೀ, ನಿನ್ನ ಕಾಲಕ್ಕಾಗಲೀ ಸಂಬಂಧಿಸಿದುವು ಅಲ್ಲವೇ ಅಲ್ಲ. ಅವುಗಳನ್ನು ಕುರಿತು ನಿನಗೆ ಯಾವ ಚಿಂತೆಯೂ ಬೇಡ. ಇವೆಲ್ಲಾ ಭವಿಷ್ಯತ್ತಿಗೆ ಸಂಬಂಧಿಸಿದಂಥವು. ಭವಿಷ್ಯತ್ತಿನಲ್ಲಿ ಧರ್ಮವು ನಶಿಸಿ, ಪಾಪವು ಬೆಳೆಯುವುದರಿಂದ ಎಂತಹ ಮಹಿಮೆಗಳಿದ್ದವರು ಕೂಡಾ ನೀಚರಾದ ರಾಜರ ಅನಾದರಕ್ಕೆ ಗುರಿಯಾಗಿ ಕಾಲ ಪ್ರವಾಹದಲ್ಲಿ ನೀನು ನೋಡಿದ ಕಲ್ಲಿನ ಹಾಗೆ ಹೊಡೆದುಕೊಂಡು ಹೋಗುತ್ತಾರೆ. ಪರಮ ನೀಚರು ಪದವಿಗಳಿಗೆ ಬರುವುದರಿಂದ ರಾಜಹಂಸಗಳಂತಹ ಯೋಗ್ಯರು ಸಹಾ ಅವರ ಕಾಲಡಿಯ ನೆರಳಿನಲ್ಲಿಯೇ ನಡೆಯಬೇಕಾದವರಾಗುತ್ತಾರೆ. ಅಧಮರಿಗೆ ಅಧಿಕಾರದ ಬಲವು ಲಭಿಸಿದರೆ ಸತ್ಯಸಂಧರು ಸಹಾ ಅವರನ್ನು ನೋಡಿ ಹೆದರಬೇಕು. ಅಧಮರು ಅವರನ್ನು ನಿರ್ಮೂಲಿಸಲೂ ನೋಡವರು" ಎಂದನು ಬುದ್ಧ.

ಬಿಂಬಿಸಾರನ ಸಂದೇಹಗಳೆಲ್ಲಾ ತೀರಿದುವು. ಯಜ್ಞಗಳ ಆಲೋಚನೆ ಕಟ್ಟಿಟ್ಟು, ಬುದ್ಧ ಭಗವಾನನಿಗೆ ಭಿಕ್ಷೆ ಹಾಕಿ ಕಳುಹಿಸಿದನು. ಉತ್ತಮ ಸಲಹೆ ನೀಡಿದ ಪತ್ನಿಯನ್ನು ಮೆಚ್ಚಿದನು.





# ಟಿಪ್ಪು ಸುಲ್ತಾನ್

ಮೈಸೂರಿನ ಪಾಲಕನಾಗಿದ್ದ ಹೈದರಾಲಿ, ಭಾರತ ದೇಶದಲ್ಲಿ ಬೆಳೆಯುತ್ತಿರುವ ಬ್ರಿಟಿಷ್ ಅಧಿಕಾರಕ್ಕೆ ತಲೆ ತಗ್ಗಿಸಲು ನಿರಾಕರಿಸಿದನು. ಬ್ರಿಟಿಷ್ ಈಸ್ಟಿಂಡಿಯಾ ಕಂಪೆನಿಗೂ, ಅವನಿಗೂ ನಡುವೆ ವೈರವು ಕ್ರಮವಾಗಿ ತೀವ್ರವಾಗುತ್ತ, ಯುದ್ಧವು ಪ್ರಾರಂಭವಾಯಿತು. ೧೭೮೨ ನೇ ವರ್ಷದಲ್ಲಿ ಕ್ಯಾನ್ಸರ್ ವ್ಯಾಧಿಯಿಂದ ಸಾಯುವವರೆಗೂ ಹೈದರಾಲಿ, ಕಂಪೆನೀ ಸೈನ್ಯದೊಂದಿಗೆ ಹೋರಾಡಿದನು.

ಹೈದರಾಲಿಯ ಅನಂತರ ಧೈರ್ಯಶಾಲಿಯೂ, ಬುದ್ಧಿವಂತನೂ ಆದ ಅವನ ಕುಮಾರ ಟಿಪ್ಪು ಸುಲ್ತಾನ್, ಸೇನೆಗಳಿಗೆ ನಾಯಕತ್ವ ವಹಿಸಿ ಯುದ್ಧವನ್ನು ಮುಂದುವರಿಸಿದನು. ಟಿಪ್ಪು ಸುಲ್ತಾನ್ ತೋರಿಸಿದ ಧೈರ್ಯ ಸಾಹಸಗಳು ಶತ್ರು ಶಿಬಿರಗಳಲ್ಲಿ ಭಯಾಂದೋಳನೆಯನ್ನುಂಟು ಮಾಡಿದುವು.





ಯುದ್ಧದಲ್ಲಿ ಬ್ರಿಟಿಷ್ ಸೇನೆಗಳು ಸೋತವು. ಕಂಪೆನೀ ಸೇನಾನಾಯಕ ಬ್ರಿಗೇಡರ್ ಮೇಥ್ಯೂಸ್ ಟಿಪ್ಪುಸುಲ್ತಾನನ ಬಂದಿಯಾದನು. ೧೭೮೪ ನೇ ವರ್ಷದಲ್ಲಿ ಬ್ರಿಟಿಷ್ ಕಂಪೆನಿ ಟಿಪ್ಪುಸುಲ್ತಾನ ನೊಂದಿಗೆ ಸಂಧಿ ಮಾಡಿಕೊಳ್ಳಲು ಒಪ್ಪಿ ಕೊಂಡಿತು.



ಟಿಪ್ಪುಸುಲ್ತಾನನಿಗೂ ಕಂಪೆನಿಗೂ ನಡುವೆ ಸ್ವಲ್ಪ ಕಾಲದವರೆಗೆ ಶಾಂತಿ ನೆಲೆಸಿತು. ಆದರೆ ಬ್ರಿಟಿಷ್ ಇಂಡಿಯಾ ಗವರ್ನರ್ ಜನರಲ್ ಕಾರನ್‌ವಾಲಿಸ್, ಮೈಸೂರು ವೀರನನ್ನು ಒಳಪಡಿಸಿಕೊಳ್ಳಲು ಸರಿಯಾದ ಸಮಯಕ್ಕಾಗಿ ಇದಿರು ನೋಡತೊಡಗಿದನು. ಮೂರುಸಾರಿ ಮೈಸೂರಿನ ಮೇಲೆ ತನ್ನ ಸೇನೆಗಳನ್ನು ಕಳುಹಿಸಿದನು. ಕಡೆಯ ಎರಡುಸಾರಿ ತಾನೇ ಸ್ವತಃ ಸೈನ್ಯಕ್ಕೆ ನಾಯಕತ್ವ ವಹಿಸಿಕೊಂಡನು.

ಬ್ರಿಟಿಷ್ ಸೈನ್ಯವು ಶ್ರೀರಂಗಪಟ್ಟಣವನ್ನು ಹಿಡಿದುಕೊಂಡಿತು. ತನ್ನ ರಾಜ್ಯದೊಳಗಿನ ಹೆಚ್ಚಿನ ಭಾಗವನ್ನು ಕಂಪೆನೀಗೆ ಕೊಡುವುದಾಗಿ ೧೭೯೨ನೇ ವರ್ಷದಲ್ಲಿ ಟಿಪ್ಪುಸುಲ್ತಾನ್ ಒಂದು ಒಪ್ಪಂದವನ್ನು ಕುದುರಿಸಿಕೊಂಡನು. ಆದರೂ ಟಿಪ್ಪುಸುಲ್ತಾನನ ಕುಮಾರರಿಬ್ಬರನ್ನು ತಮ್ಮ ಹತ್ತಿರ ಒತ್ತೆಯಾಗಿ ಇರಿಸಬೇಕೆಂದು ಬ್ರಿಟಿಷ್ ಪ್ರಭುತ್ವವು ನಿರ್ಬಂಧಿಸಿತು.





ಈ ದುಸ್ಥಿತಿಯನ್ನು ಸಹಿಸಲು ಟಿಪ್ಪುಸುಲ್ತಾನನಿಂದಾಗಲಿಲ್ಲ. ಹೈದ್ರಾಬಾದು ನಿಜಾಮನೊಂದಿಗೆ ಸಂಬಂಧ ನಡೆಸಲು ಟಿಪ್ಪುಸುಲ್ತಾನ್ ಪ್ರಯತ್ನಿಸಿದನು. ತನ್ನ ಕುಮಾರನಿಗೆ ನಿಜಾಮನ ಮಗಳೊಂದಿಗೆ ಮದುವೆ ಮಾಡಿಸೋಣವೆಂದು ಹೈದ್ರಾಬಾದು ನಿಜಾಮನಿಗೆ ಪ್ರತ್ಯೇಕ ದೂತನ ಮೂಲಕ ಸುದ್ದಿ ಕಳುಹಿಸಿದನು.

ಆದರೆ ಅದಕ್ಕೆ ಮೊದಲೇ ನಿಜಾಮನು ಕಂಪೆನಿಯೊಂದಿಗೆ ಮೈತ್ರಿಯ ಒಪ್ಪಂದ ಮಾಡಿಕೊಂಡಿದ್ದನು. ಆಮೇಲೆ ಟಿಪ್ಪುಸುಲ್ತಾನ್ ಬ್ರಿಟಿಷರನ್ನು ಇದಿರಿಸಲು ಸಹಾಯ ಕೇಳುತ್ತ, ಅರೇಬಿಯಾ, ಅಫ್ಘಾನಿಸ್ತಾನ್, ಟರ್ಕಿ, ಫ್ರಾನ್ಸ್ ದೇಶಗಳಿಗೆ ತನ್ನ ದೂತರನ್ನು ಕಳುಹಿಸಿದನು. ಆದರೆ ಯಾರಿಂದಲೂ ಸಹಾಯ ಲಭಿಸಲಿಲ್ಲ.





ಮಾರಿಷಸ್ ದ್ವೀಪದಲ್ಲಿ ಫ್ರೆಂಚ್ ಸೇನೆಗಳಿರುವುದೆಂದು ಯಾರೋ ಹೇಳಲು, ಟಿಪ್ಪುಸುಲ್ತಾನ್ ನಿಜವೆಂದುಕೊಂಡು ಅಲ್ಲಿಯ ಫ್ರೆಂಚ್ ಗವರ್ನರ್ ಮಲಾರ್‌ಟಿಕ್ಕನಿಗೆ ಸೇನೆಗಳನ್ನು ಕಳುಹಿಸುವಂತೆ ರಹಸ್ಯವಾಗಿ ಸುದ್ದಿ ಕಳುಹಿಸಿದನು. ಆದರೆ ಅಲ್ಲಿ ಫ್ರೆಂಚ್ ಸೇನೆಗಳು ಇರಲಿಲ್ಲ. ಆದರೂ ಟಿಪ್ಪುಸುಲ್ತಾನನ ಮೇಲೆ ತನಗಿರುವ ಸದಭಿಪ್ರಾಯದಿಂದ ಫ್ರೆಂಚ್ ಗವರ್ನರ್, ಬ್ರಿಟಿಷರನ್ನು ಇದಿರಿಸಬೇಕೆಂಬ ಇಚ್ಛೆಯುಳ್ಳ ಯಾರಾದರೂ ಸರಿಯೆ, ಟಿಪ್ಪುಸುಲ್ತಾನನ ಸೈನ್ಯದೊಂದಿಗೆ ಸೇರಬಹುದೆಂದು ಬಹಿರಂಗವಾಗಿ ಡಂಗುರ ಹಾಕಿಸಿದನು.

ಈ ಸಂಗತಿ ಭಾರತ ದೇಶಕ್ಕೆ ಹೊಸತಾಗಿ ಗವರ್ನರ್ ಜನರಲ್ ಆಗಿ ಬಂದ ವೆಲ್ಲೆಸ್ಲೀಗೆ ಗೊತ್ತಾಯಿತು. ಟಿಪ್ಪುಸುಲ್ತಾನ್ ಯುದ್ಧಕ್ಕಾಗಿ ಸಿದ್ಧನಾಗುತ್ತಿರುವನೆಂದು ತಿಳಿಯುತ್ತಲೇ ೧೭೯೮ನೇ ವರ್ಷದಲ್ಲಿ ವೆಲ್ಲೆಸ್ಲೀ ಯುದ್ಧವನ್ನು ಪ್ರಕಟಿಸಿದನು. ಬ್ರಿಟಿಷ್ ಕಂಪೆನಿಯೊಂದಿಗೆ ನಿಜಾಮನೂ, ಮಹಾರಾಷ್ಟ್ರರು ಕೂಡಾ ಕಲೆತುಕೊಂಡರು. ಈ ರೀತಿಯಾಗಿ ಟಿಪ್ಪುಸುಲ್ತಾನನ ಶತ್ರುಗಳು ಬಲಿಷ್ಠರಾದರು.





ಶತ್ರುಗಳು ಒಂದೇಸಾರಿ ಮೂರು ದಿಕ್ಕುಗಳಿಂದಲೂ ಶ್ರೀರಂಗಪಟ್ಟಣವನ್ನು ಮುತ್ತಿದರು. ಬರಿಯ ಕಂಪೆನಿಯ ಸೈನ್ಯವೇ ೩೫ ಸಾವಿರಕ್ಕೆ ಮೇಲೆಯೇ ಇದ್ದಿತು. ಆದರೊಂದಿಗೇ ಇತರರ ಸಹಾಯ ಕೂಡಾ ಜತೆಗೂಡಿದುದರಿಂದ ಟಿಪ್ಪು ಸುಲ್ತಾನನ ವಿಜಯದ ಅವಕಾಶ ಸಣ್ಣಗಾಯಿತು.

ಟಿಪ್ಪುಸುಲ್ತಾನನು ಬಾಗಿ ವಶನಾಗಿ ಕಂಪೆನಿಯವರು ಕೊಡುವ ಭರಣದಿಂದ ಸುಖವಾಗಿ ಜೀವಿಸಬಹುದೆಂದು ಕಂಪೆನಿ ಸಂಧಾನಮಾಡಿತು. ಟಿಪ್ಪುಸುಲ್ತಾನ್ ಅದಕ್ಕೆ ಒಪ್ಪಲಿಲ್ಲ. ಅದ್ಭುತವಾದ ಧೈರ್ಯ ಸಾಹಸಗಳಿಂದ ಮರಣಾಂತದವರೆಗೂ ಯುದ್ಧ ಮಾಡಿದನು.





ತನ್ನ ದೇಶದೊಳಗಿನ ಇತರ ಪಾಲಕರು ತನಗೆ ವ್ಯತಿರೇಕವಾಗಿ ಕಂಪೆನಿಯವರೊಂದಿಗೆ ಕೂಡಿಕೊಂಡರೂ, ತಾನು ಮಾತ್ರ ಕೊನೆಯ ಕ್ಷಣದವರೆಗೂ ಕಂಪೆನಿಯ ಅಧಿಕಾರವನ್ನು ಇದಿರಿಸಿ ಟಿಪ್ಪುಸುಲ್ತಾನ್ ಚರಿತ್ರೆಯಲ್ಲಿ ಅಮರನಾಗಿರುವನು. ಅವನು ತನ್ನ ಪ್ರಜೆಗಳಾದ ಹಿಂದುಗಳನ್ನು ತುಂಬಾ ಗೌರವದಿಂದ ನೋಡಿದನು. ರಾಣಾಪ್ರತಾಪ್ ಮೊಗಲರನ್ನು ಇದಿರಿಸಿ ಹೋರಾಡಿದಂತೆಯೇ ಟಿಪ್ಪುಸುಲ್ತಾನ್ ಬ್ರಿಟಿಷ್ ಅಧಿಕಾರವನ್ನು ವಿರೋಧಿಸಿದನು.



# ಸಿಟ್ಟಿನ ಗಂಡ

ಒಂದು ಊರಿನಲ್ಲಿ ಅರುಣಾಳೆಂಬ ಯುವತಿ ಮದುವೆಯಾಗಿ ಹೊಸತಾಗಿ ಅತ್ತೆಯ ಮನೆಗೆ ಬಂದಳು. ಅವಳ ಗಂಡ ಸದಾನಂದನು ಪಟ್ಟಣದಲ್ಲಿ ಪ್ರತ್ಯೇಕ ಬಿಡಾರ ಹೂಡಿಕೊಂಡಿದ್ದನು. ಆದುದರಿಂದ ಅರುಣಾಳಿಗೆ ಅತ್ತೆಮಾವಂದಿರ ಕಾಟವೇನಿರಲಿಲ್ಲ. ಅವರು ಒಂದು ಸಂಗತಿ ಹೇಳಿ ಅವಳಿಗ ಎಚ್ಚರಿಕೆ ಕೊಟ್ಟಿದ್ದರು. ಸದಾನಂದನು ಎಲ್ಲಾ ವಿಧದಲ್ಲಿಯೂ ಒಳ್ಳೆಯವನಾದರೂ ಅವನಿಗೆ ಮೂಗಿನ ಮೇಲೆಯೇ ಕೋಪವಿರುತ್ತದೆಂಬುದೇ ಆ ಎಚ್ಚರಿಕೆ.

ಸದಾನಂದನು ಪಟ್ಟಣದಲ್ಲಿ ದೊಡ್ಡದೊಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದನು. ಆ ಮನೆಯಲ್ಲಿ ನಾಲ್ಕು ಕೋಣೆಗಳಿದ್ದುವು. ಮನೆಯ ಓಂದೆ ತರಕಾರಿ ಬೆಳೆಯಿಸಲು ಸ್ಥಳವಿದ್ದಿತು.

ಎಂಟು ಹತ್ತು ದಿನಗಳು ಹಾಯಾಗಿ ಕಳೆದುವು. ಅದುವರೆಗೆ ಸದಾನಂದನು ಹೆಂಡತಿಯೊಂದಿಗೆ ಅನೇಕ ಬಾರಿ "ಎಲ್ಲರೂ ನನ್ನನ್ನು ಕೋಪದವನೆನ್ನುತ್ತಾರೆ. ಬೇರೆಯವರು ಕೆಣಕಿದರೆ ಹೊರತು ನನಗೆ ಕೋಪ ಬಾರದು. ಅದೇನಾದರೂ ನಿನ್ನ ಮೇಲೆ ನನಗೆ ಕೊಪವೇ ಬಾರದು !" ಎನ್ನುತ್ತಿದ್ದನು.

ಮತ್ತೊಂದು ವಾರವು ಕಳೆದ ಮೇಲೆ ಸದಾನಂದನು ಹೆಂಡತಿಯೊಂದಿಗೆ, "ನಿನಗೆ ಒಬ್ಬಳು ಕೆಲಸದವಳನ್ನು ಇರಿಸುತ್ತೇನೆ" ಎಂದನು.

"ಏಕೆ ಸುಮ್ಮನೆ ? ನಾನೊಬ್ಬಳೇ ಮನೆಯಲ್ಲಿ ಏನೂ ಮಾಡದೆ ಹೇಗೆ ಸುಮ್ಮನಿರಲಿ ? ಎಲ್ಲಾ ಕೆಲಸ ನಾನೇ ಮಾಡುತ್ತೇನೆ ಬಿಡಿ" ಎಂದಳು ಅರುಣಾ.

ಕೂಡಲೇ ಸದಾನಂದನಿಗೆ ಸಿಟ್ಟು ಬಂತು, "ಅಂದರೇನರ್ಥ ? ಈ ಮನೆಯ ಕೆಲಸವೆಲ್ಲಾ ಒಬ್ಬರಿಂದಲೇ ಆಗುತ್ತದೆಂದು ನಿನ್ನ ಅಭಿಪ್ರಾಯ ? ಅಂದರೆ ಗಂಡನಾದ ನಾನೂ ಮಾಡಬೇಕು ಅಂತಾಯಿತು. ಸರಿ. ನಾನೇನೂ ಕೈಲಾಗದವನಲ್ಲ !" ಎಂದು ಹೇಳಿ, ಆ ದಿನ ಬೆಳಿಗ್ಗೆ ಮನೆಯೊಳಗಿನ ಕಸವನ್ನೆಲ್ಲಾ ಗುಡಿಸಿ ಮುಸುರೆ ತಿಕ್ಕಿ, ಬಟ್ಟೆ ಒಗೆದು, ಆಮೇಲೆ ಕಚೇರಿಗೆ ಹೊರಟು ಹೋದನು.

ಮತ್ತೊಂದು ದಿನ ಸದಾನಂದನು ಬಾಡಿಗೆ ಮನೆಯ ವಿಷಯ ಮಾತಾಡುತ್ತ, "ಈ ಮನೆ ಚೆನ್ನಾಗಿದೆಯಷ್ಟೆ ?" ಎಂದನು.

ಚೆನ್ನಾಗಿದೆ ಎಂಬ ಅರ್ಥದಲ್ಲಿ ಓ ಎಂದು ತಲೆಯಾಡಿಸಿದಳು ಅರುಣಾ.

"ವಸುಂಧರ"



" ಏಕೆ ಚೆನ್ನಾಗಿರದು ? ಇದಕ್ಕಾಗಿ ಹೆಚ್ಚಿನ ಬಾಡಿಗೆ ಕೊಡುತ್ತಿದ್ದೇನೆ. ಇಷ್ಟು ಬಾಡಿಗೆ ಕೊಡ ಬೇಕಾದರೆ ಸಂಬಳ ಸಾಕಷ್ಟಿರಬೇಡವೇ ? " ಎಂದು ಹೇಳಿ ಸದಾನಂದನು ಮನೆಯ ಹಿಂಬದಿಗೆ ಹೋಗಿ, ತರಕಾರಿಗಳಿಗಾಗಿ ಓಳಿಗಳನ್ನೂ, ಹೊಂಡಗಳನ್ನೂ ತೆಗೆದನು. ಸಹಾಯಕ್ಕೆ ಬಂದ ಅರುಣಳನ್ನು ದೂರ ಹೋಗೆಂದು ಬಯ್ದನು. ಅವನ ಮೈ ಬೆವರಿತು.

ಗಂಡನ ಕೋಪದ ರೀತಿ ಅರುಣಳಿಗೆ ವಿಚಿತ್ರ ವಾಗಿ ತೋರಿತು. ಕೋಪ ಬಂದಾಗಲೆಲ್ಲ ಅವನು ತನ್ನನ್ನು ತಾನು ವಿಪರೀತ ಶ್ರಮಪಡಿಸಿಕೊಳ್ಳುತ್ತಾನೆ. ಆಗ ನಡೆಯುವುದೆಲ್ಲ ಉಪಯೋಗಕರವಾದ ಕೆಲಸ ಗಳೇನೋ ನಿಜ. ಆದರೆ ತಾನೂ ಸಹಾಯ ಮಾಡಿದರೇನಂತೆ ?

ಒಂದು ದಿನ ಅರುಣ ನೆರೆಮನೆಯ ಗೃಹಿಣಿ ಯೊಂದಿಗೆ ತನ್ನ ಸಂಕಟವನ್ನು ತೋಡಿಕೊಂಡಳು. ಅದನ್ನು ಕೇಳಿ ಆ ಗೃಹಿಣಿ, " ಇಂತಹ ಕೋಪ ನನ್ನ ಗಂಡನಿಗೂ ಇರುತ್ತಿದ್ದರೆ ಎಷ್ಟೋ ಒಳ್ಳೇದಿತ್ತು. ನಿನ್ನಂತಹ ಅದೃಷ್ಟವಂತೆಯನ್ನು ನಾನೆಲ್ಲಿಯೂ ನೋಡಲಿಲ್ಲ. ಪುಣ್ಯವಂತೆ ನೀನು " ಎಂದಳು.

ಹೀಗಿರುವಾಗ ಒಂದು ದಿನ ಸದಾನಂದನು ಒಬ್ಬ ಸಾಧುವನ್ನು ಕರೆದುಕೊಂಡು ಮನೆಗೆ ಬಂದನು. ಆ ಸಾಧುವಿಗೆ ಬಹಳ ಮಹಿಮೆಗಳಿದ್ದುವೆಂದು ಪ್ರತೀತಿ ಯಿತ್ತು. ತನ್ನ ಹೆಂಡತಿ ಎಲ್ಲಾ ವಿಷಯಗಳಲ್ಲಿಯೂ ಒಳ್ಳೆಯವಳೇ ಆದರೂ, ಮಾತು ಮಾತಿಗೂ ಅವನನ್ನು ಕೋಪಪಡಿಸುವಳಂತೆ. ಅವಳ ಸ್ವಭಾವವನ್ನು ಬದ ಲಾಯಿಸಬೇಕೆಂದು ಹೇಳಿ ಅವನು ಸಾಧುವನ್ನು ಕರೆದು ತಂದಿದ್ದನು.

ಉಪಚಾರಗಳಾದ ಮೇಲೆ ಸಾಧು ಅರುಣಳನ್ನು ಕರೆದು, " ಏನಮ್ಮಾ ? ನಿನಗೆ ಗಂಡನ ಮೇಲೆ ಬೇಸರವೇನಾದರೂ ಇದೆಯೆ ? " ಎಂದು ಕೇಳಿದನು.

ಇಲ್ಲವೆಂಬಂತೆ ಅರುಣ ತಲೆಯಾಡಿಸಿದಳು.

" ನಿನ್ನ ಗಂಡನಲ್ಲಿ ಬದಲಾವಣೆಯಾಗಬೇಕೆಂದು ಆಶಿಸುವಿಯಾ ? " ಎಂದು ಕೇಳಿದನು ಸಾಧು.

ಹೌದೆಂಬಂತೆ ಅರುಣ ತಲೆಯಾಡಿಸಿದಳು.

" ಅದೇನೆಂದು ಸ್ವಲ್ಪ ಹೇಳು ನೋಡುವಾ " ಎಂದನು ಸಾಧು.

ಅರುಣ ಸದಾನಂದನ ಕಡೆಗೆ ನೋಡಿದಳು.

" ಹೆದರಬೇಡಮ್ಮ, ಮನಸ್ಸಿನಲ್ಲಿರುವುದನ್ನು ಹೇಳಿಬಿಡು " ಎಂದನು ಸಾಧು.

" ಇವರಿಗೆ ಅರ್ಥವಿಲ್ಲದ ಹಾಗೆ ಕೋಪ ಬರುತ್ತೆ. ಅದು ಹೋದರೆ ಸಾಕು " ಎಂದಳು ಅರುಣ.

" ಸರಿಸರಿ, ನಿನ್ನ ಗಂಡನ ಕೋಪ ತಗ್ಗುತ್ತದೆ. ಅದಕ್ಕಾಗಿ ನೀನು .ಒಂದು ತಿಂಗಳವರೆಗೆ ಒಪ್ಪೊತ್ತು ಊಟ ಮಾಡುತ್ತಿರಬೇಕು " ಎಂದನು ಸಾಧು.

" ಅದೇನೂ ಕಷ್ಟವಿಲ್ಲ " ಎಂದು ಅರುಣ ಅದಕ್ಕೆ ಕೂಡಲೇ ಸಮ್ಮತಿಸಿದಳು. ಸಾಧು ಅವಳ ಕಿವಿ ಯಲ್ಲಿ ಮತ್ತೇನೋ ಸ್ವಲ್ಪ ಉಪದೇಶ ಮಾಡಿ,

ಒಳಗೆ ಕಳುಹಿಸಿದನು. ಅದೇನೋ ಉಪವಾಸದ ಮಂತ್ರವಿರಬೇಕೆಂದುಕೊಂಡನು ಸದಾನಂದ.

ಆಮೇಲೆ ಸಾಧು ಸದಾನಂದನೊಂದಿಗೆ, "ಪಾಪ! ನಿನ್ನ ಹೆಂಡತಿಗೆ ನಿನ್ನ ಮೇಲೆ ಬಹಳ ಪ್ರೀತಿಯಪ್ಪಾ. ಈ ವಯಸ್ಸಿನಲ್ಲಿ ಯಾರಿಗಾದರೂ ಹಸಿವೆ ಹೆಚ್ಚಾಗಿಯೇ ಇರುತ್ತದೆ. ಆದರೂ ಅವಳು ಒಪ್ಪೊತ್ತು ವ್ರತ ಹಿಡಿಯಲು ಸಿದ್ಧಳಾದಳೆಂದರೆ, ಅವಳಿಗೆ ನಿನ್ನ ಕೋಪದಿಂದ ಎಷ್ಟು ಸಂಕಟವಾಗುತ್ತದೋ ತಿಳಿಯುತ್ತದೆ" ಎಂದನು.

"ಅದು ಸುಮ್ಮನೆ ನಾಟಕ ಸ್ವಾಮಿ" ಎಂದು ತಾನು ಕೋಪ ಬಂದಾಗ ಅವಳಿಗೆ ಸಹಾಯಕವಾದ ಎಷ್ಟೆಲ್ಲ ಕೆಲಸಗಳನ್ನು ಮಾಡುವೆನೆಂಬುದನ್ನೆಲ್ಲ ಹೆಮ್ಮೆಯಿಂದ ವಿವರಿಸಿ ಹೇಳಿದನು ಸದಾನಂದ.

ಸಾಧು ಅದನ್ನೆಲ್ಲ ಮುಗುಳ್ನಗುತ್ತ ಕೇಳಿ, "ಅಂದರೆ ನಿನ್ನ ಕೋಪದಿಂದ ನಿನಗೆ ಕಷ್ಟವೂ ನಿನ್ನ ಹೆಂಡತಿಗೆ ಲಾಭವೂ ಆಗುತ್ತದೆಂದಾಯಿತು. ಆದರೂ ಹೆಂಡತಿ ನಿನ್ನ ಕೋಪವನ್ನು ಹೋಗಲಾಡಿಸಲಿಕ್ಕೇ ನೋಡುತ್ತಾಳೆ. ಅಷ್ಟೊಂದು ಉತ್ತಮಳಾದ ಹೆಂಡತಿ ಸಿಗುವುದು ನಿನ್ನ ಪೂರ್ವಜನ್ಮದ ಪುಣ್ಯ! ಅದೃಷ್ಟ!" ಎಂದನು ಸಾಧು.

ಸಾಧುವಿನ ಮಾತುಗಳಲ್ಲಿ ನಿಜವಿರುವುದೆಂದು ಸದಾನಂದನಿಗೆ ಹೊಳೆದರೂ, ಹೆಂಡತಿಯ ಕಾರಣದಿಂದಾಗಿ ಸಾಧುವಿನಿಂದ ತಾನೇ ಬುದ್ಧಿ ಹೇಳಿಸಿಕೊಳ್ಳಬೇಕಾಗಿ ಬಂದಿತೆಂದು ಬಹಳ ಕೋಪವೇ ಎದ್ದಿತು. ಸಾಧು ಹೊರಟುಹೋದ ಕೂಡಲೇ ಅವನು ಹೆಂಡತಿಯ ಮೇಲೆ ಉರಿದು ಬೀಳುತ್ತ, ನೀರು ಸೇದಿ ಮನೆ ಪೂರಾ ಸುರಿದು ತೊಳೆದು ಜಾಡಿಸಿ ಜಳಜಳ ಮಾಡಿದನು.

ಆಗ ಅರುಣಳಿಗೆ ಏನು ಮಾಡಲೂ ತೋರದೆ ಮನೆಯಿಂದ ಹೊರಗೆ ಹೋಗಿಬಿಟ್ಟಳು. ಆ ದಿನ ಕಚೇರಿಗೆ ರಜೆಯಾದುದರಿಂದ ಸದಾನಂದನು



ಹೆಂಡತಿಯನ್ನು ನಿರೀಕ್ಷಿಸುತ್ತ ಮನೆಯಲ್ಲಿದ್ದನು. ಸಾಯಂಕಾಲವಷ್ಟೇ ಅರುಣ ಮನೆಗೆ ಬಂದಳು.

"ಎಲ್ಲಿಗೆ ಹೋದೆ?" ಎಂದು ಕೋಪದಿಂದ ಕೇಳಿದನು ಸದಾನಂದ.

"ಪಕ್ಕದಲ್ಲಿ ಒಬ್ಬರ ಮನೆಯಲ್ಲಿ ಕೆಲಸ ಮಾಡಲಿಕ್ಕೆ ಹೋದೆ" ಎಂದಳು ಅರುಣ.

ಸದಾನಂದನು ಇನ್ನಷ್ಟು ಕೋಪದಿಂದ "ಅಂಥಾ ಗತಿಗೇಡು ನಿನಗೇನು ಬಂತು?" ಎಂದು ಕೇಳಿದನು.

"ಗತಿಗೇಡು ಏನೂ ಬಂದಿಲ್ಲ. ಕೋಪ. ಸುಮ್ಮ ಸುಮ್ಮನೆ ನೀವು ನನ್ನ ಮೇಲೆ ಕೋಪ ಮಾಡುತ್ತಾ ಇದ್ದರೆ ನನಗೂ ಕೋಪ ಬರುತ್ತದೆ. ಆಗ ನನಗೂ ಕೆಲಸಮಾಡುವ ಹುಮ್ಮಸ್ಸು ಏಳುತ್ತದೆ. ಮನೆಯ ಕೆಲಸ ಮಾಡಲು ನೀವು ಬಿಡುವುದಿಲ್ಲ. ಆದಕ್ಕೆ ಪಕ್ಕದವರ ಮನೆಗೆ ಹೋಗಿ ಅವರು ಹೇಳಿದ ಹಾಗೆ ಕೆಲಸ ಮಾಡುತ್ತೇನೆ" ಎಂದಳು ಅರುಣ. "ಇದೇನು ಬುದ್ಧಿ ಬಂತು ನಿನಗೆ? ನೀನು ಹೀಗೆ ಪರರ ಮನೆ

ಯಲ್ಲಿ ಕೆಲಸ ಮಾಡಿದರೆ ನನ್ನ ಮರ್ಯಾದೆ ಏನಾಗಬೇಕು ? " ಎಂದನು ಸದಾನಂದ.

"ನಿಮ್ಮ ಮರ್ಯಾದೆಗೆ ಯಾವ ಭಂಗವೂ ಬಾರದು. ನನ್ನ ಗಂಡನಿಗೆ ಮೈಸರಿಯಿಲ್ಲವೆಂದು ಹೇಳಿದ್ದೇನೆ. ನಿಮ್ಮ ಆರೋಗ್ಯ ಸರಿಯಾಗುವವರೆಗೆ ಪರರ ಮನೆಯಲ್ಲಿ ಕೆಲಸಮಾಡಬೇಕೆಂದು ಸಾಧುಗಳೊಬ್ಬರು ಹೇಳಿದ್ದಾರೆಂದು ಆ ಮನೆಯವರಿಗೆ ಹೇಳಿದ್ದೇನೆ" ಎಂದಳು ಅರುಣ.

"ಹಾಗೇನು ! ಅದೇನಾದರೂ ಸರಿಯೇ ! ನೀನು ಪರರ ಮನೆಯಲ್ಲಿ ಕೆಲಸ ಮಾಡಲೇ ಬಾರದು ! ಕೂಡದು !" ಎಂದನು ಸದಾನಂದ.

"ನೀವು ನಮ್ಮ ಮನೆಯಲ್ಲಿ ಹೀಗೆ ಕೆಲಸಮಾಡುವಷ್ಟು ಕಾಲ ನಾನು ಬೇರೆಯವರ ಮನೆಯಲ್ಲಿ ಕೆಲಸ ಮಾಡುತ್ತಲೇ ಇರುತ್ತೇನೆ. ನನಗೂ ಕೋಪ ಬರುತ್ತಲ್ಲ ? " ಎಂದಳು ಅರುಣ.

"ನಾನು ಮನೆಯಲ್ಲಿ ಕೆಲಸಮಾಡುವುದರಿಂದ ನಿನಗಾಗುವ ನಷ್ಟವೇನು ?" ಎಂದು ಸದಾನಂದನು ಕೇಳಿದನು.

"ನಾನು ಬೇರೆಯವರ ಮನೆಯಲ್ಲಿ ಕೆಲಸ ಮಾಡುವುದರಿಂದ ನಿಮಗೆ ಬರುವ ನಷ್ಟವೇನು ? ನಿಮ್ಮ ಕೋಪ ನನಗೆ ಸಹಾಯ ಮಾಡುವುದಾದರೆ, ನನ್ನ ಕೋಪವು ಬೇರೆಯವರಿಗೆ ಸಹಾಯ ಮಾಡುತ್ತದೆ. ನಿಮ್ಮ ಈ ಕೋಪದ ಜಾಡ್ಯ ಗುಣವಾಗುವ ವರೆಗೆ ತಾನೇ ಇದೆಲ್ಲಾ ? " ಎಂದಳು ಅರುಣ.

ಹೆಂಡತಿಯೊಂದಿಗೆ ಇಷ್ಟೆಲ್ಲ ವಾದ ನಡೆದ ಮೇಲೆ ಸದಾನಂದನಿಗೆ ನಿಜ ಸಂಗತಿ ಅರ್ಥವಾಯಿತು. ಹೆಂಡತಿಯ ಮೇಲೆ ತನಗೆ ಅತ್ಯಂತ ಪ್ರೇಮವಿರುವುದರಿಂದಲೇ, ಅವಳು ಕಷ್ಟಪಡುವುದನ್ನು ತನ್ನಿಂದ ನೋಡಲಾಗುವುದಿಲ್ಲ. ಅದೇ ವಿಧವಾಗಿ ಅವಳಿಗೂ ತನ್ನ ಮೇಲೆ ಪ್ರೇಮವಿದೆ. ತಾನು ಕಷ್ಟಪಡುವುದನ್ನು ಅವಳಿಗೂ ನೋಡಲಾಗುವುದಿಲ್ಲ. ಈ ಸಂಗತಿಯನ್ನೇ ಸಾಧುವೂ ಸೂಚಿಸಿದ್ದ !

"ಈಗ ಗೊತ್ತಾಯಿತು ಅರುಣಾ, ನನ್ನನ್ನು ಮನ್ನಿಸು ! ಇನ್ನು ನಿನ್ನ ಮೇಲೆ ಕೋಪ ತೋರಿಸಲಾರೆ !" ಎಂದನು ಅವಳ ಕೈ ಹಿಡಿದು ಸದಾನಂದ.

"ಅಬ್ಬ ! ಸಾಧುಗಳು ಹೇಳಿದ ಉಪಾಯ ಫಲಿಸಿತು. ಅವರು ಹೇಳಿದ ಹಾಗೆಯೇ ಒಂದು ತಿಂಗಳು ಒಪ್ಪೊತ್ತಿನ ವ್ರತ ಮುಂದುವರಿಸಿ ಬಿಡುತ್ತೇನೆ" ಎಂದು ಅರುಣಳು ಗಂಡನು ಎಷ್ಟು ಹೇಳಿದರೂ ಕೇಳದೆ, ಹಾಗೆಯೇ ಒಂದು ಹೊತ್ತು ಉಪವಾಸ ಕುಳಿತಳು. ಅವಳೊಂದಿಗೆ ಅಷ್ಟು ದಿನಗಳ ವರೆಗೆ ಸದಾನಂದನೂ ಉಪವಾಸವಿದ್ದನು.

ಆಮೇಲೆ ಅವರಿಬ್ಬರೂ ಕೋಪಿಸಿಕೊಳ್ಳದೆ, ಒಬ್ಬರಿಗೊಬ್ಬರು ಸಹಾಯಕರಾಗಿ ಸುಖವಾಗಿದ್ದರು.





# ನಾಟಕದ ಹುಚ್ಚು

ಒಂದು ಊರಿನಲ್ಲಿ ಗೋವಿಂದನೆಂಬವನಿಗೆ ಚಿಕ್ಕಂದಿನಿಂದಲೂ ಓದು ಬರೆಹಗಳ ಮೇಲೆ ಇಷ್ಟವೇ ಇರಲಿಲ್ಲ. ಬೈಲಾಟ, ಬೊಂಬೆಯಾಟ. ಬೀದಿಭಾಗವತ, ನಾಟಕಗಳೆಂದರೆ ಊಟ ನಿದ್ದೆ ಬೇಡದಷ್ಟು ಹುಚ್ಚು, ಹೀಗೆ ತಿರುಗಿ ತಿರುಗಿ ದೊಡ್ಡವನಾದ ಮೇಲೆ ಗ್ರಾಮವನ್ನು ಬಿಟ್ಟು ಪಟ್ಟಣಕ್ಕೆ ಹೋಗಿಬಿಟ್ಟನು. ಅಲ್ಲಿರುವ ಒಂದು ನಾಟಕ ಸಮಾಜದಲ್ಲಿ ಸೇರಿ ತನಗೊಂದು ವೇಷವನ್ನೂ ಸಂಪಾದಿಸಿಕೊಂಡನು. ಅವರು ನಾಟಕವನ್ನು ಪ್ರದರ್ಶಿಸಲು ಹತ್ತು ದಿನಗಳಿರುವ ಮೊದಲು ಅಭ್ಯಾಸಕ್ರಮವು ಪ್ರಾರಂಭವಾಯಿತು.

ಆ ನಾಟಕದಲ್ಲಿ ಗೋವಿಂದನಿಗೆ ತಾಯಿಯನ್ನು ವಿರೋಧಿಸಿ ಓಡಿ ಹೋದ ಮಗನ ಪಾತ್ರವಾಗಿತ್ತು. ಆ ಮಗನು ತಾಯಿಯೊಂದಿಗೆ ಜಗಳಮಾಡಿ ಓಡಿ ಹೋಗುತ್ತಾನೆ. ತಾಯಿ ತನ್ನ ತಮ್ಮನಿಂದ ಅವನನ್ನು ಹುಡುಕಿಸುತ್ತಾಳೆ. ಆ ಸೋದರ ಮಾವನು ಅವನಿರುವ ಜಾಗವನ್ನು ಕಂಡು ಹಿಡಿದು, ಅವನ ತಾಯಿ ಚಿಂತೆಯಿಂದ ಹಾಸಿಗೆ ಹಿಡಿದಿದ್ದಾಳೆಂದು ಹೇಳುತ್ತಾನೆ. ಆದರೂ ಆ ಹುಡುಗನು ತಾಯಿಯನ್ನು ನೋಡಲು ಬರಲಾರೆನೆಂದು ಪಟ್ಟು ಹಿಡಿಯುತ್ತಾನೆ. ಕಡೆಗೆ ತಾಯಿಯೇ ಅಷ್ಟೊಂದು ರೋಗದಲ್ಲಿ ಕೂಡಾ ಮಗನನ್ನು ಹುಡುಕಿಕೊಂಡು ಅವನಿರುವ ಸ್ಥಳಕ್ಕೆ ಬರುತ್ತಾಳೆ. ಆಗ ತಾಯಿಯ ಪ್ರೇಮವನ್ನು ಅರ್ಥ ಮಾಡಿಕೊಂಡ ಆ ಪೋಲಿ ಹುಡುಗ, ಅವಳ ಜತೆಯಲ್ಲಿ ಊರಿಗೆ ಹೋಗುತ್ತಾನೆ.

ನಾಟಕದಲ್ಲಿ ಸೋದರ ಮಾವನ ಪಾತ್ರವನ್ನು ನಾಟಕ ಸಮಾಜದ ಯಜಮಾನನಾದ ರಾಜಾರಾಮನು ಹಾಕುತ್ತಾನೆ. ಗೋವಿಂದನಿಗೆ ತನ್ನ ಪಾತ್ರದ ಸಂಭಾಷಣೆಗಳೂ, ಅದಕ್ಕೆ ತಕ್ಕ ಅಭಿನಯಗಳೂ ಅಭ್ಯಾಸವಾಗ ಬೇಕಿತ್ತು. ಆದ್ದರಿಂದ ದಿನಾ ರಾಜಾರಾಮನೇ ಗೋವಿಂದನು ಬಿಡಾರವಿರುವಲ್ಲಿಗೇ ಬಂದು ಅವನಿಗೆ ಹೇಳಿ ಕೊಟ್ಟು ಹೋಗುತ್ತಾನೆ.

ಆ ದಿನ ರಾಜಾರಾಂ ಸ್ವಲ್ಪ ತಡವಾಗಿಯೇ ಬಂದಿದ್ದನು. ಸಾಯಂಕಾಲ ಕಳೆದು ಕತ್ತಲೆ ಬರುವ ವೇಳೆಯಾಗಿತ್ತು. "ಗೋವಿಂದಾ, ನನಗೆ ಸಾವಿರ ಕೆಲಸಗಳಪ್ಪ. ಇವತ್ತಿನಿಂದ ಈ ಹೊತ್ತಿಗೇ ಬರುತ್ತೇನೆ. ನೀನೂ ತಯಾರಾಗಿರಬೇಕು" ಎಂದನು.

"ಹಾಗೇ ಆಗಲಿಬಿಡಿ. ಅದಕ್ಕೇನಂತೆ ? ಬನ್ನಿ" ಎಂದು ಗೋವಿಂದನು ಮನೆಯ ಹಿಂದಿನ ಬದಿಗೆ

ಎಂ. ಕೆ. ಈಶ್ವರರಾವ್



ಹೋದನು. ಅಲ್ಲಿಯೇ ಅಭ್ಯಾಸ ನಡೆಸುವುದು. ಆ ಹಿಂಬದಿಯ ಸ್ಥಳವನ್ನು ಮುಚ್ಚಿ ಅಡ್ಡನಿಂತ ಹಾಗೆ ಜಮೀನ್ದಾರರ ಮನೆಯ ಉನ್ನತವಾದ ಆವರಣದ ಗೋಡೆ ಇದ್ದಿತು. ಆದರೆ ಆ ಗೋಡೆ ಶಿಥಿಲವಾದುದರಿಂದ ಅಲ್ಲಲ್ಲಿ ಬಿಲಗಳೂ, ಖಿಂಡಿಗಳೂ ಏರ್ಪಟ್ಟಿದ್ದುವು.

ರಾಜಾರಾಂ ನಾಟಕ ಸಂಭಾಷಣೆಯನ್ನು ಪ್ರಾರಂಭಿಸುತ್ತ, “ಏನಪ್ಪಾ ಇದು? ನೀನು ಇಷ್ಟು ಹಟ ಮಾಡಬಾರದು ಕಣೋ! ನೀನು ಮನೆ ಬಿಟ್ಟ ಮೇಲೆ ನಿನ್ನ ಅಮ್ಮ ನಿನ್ನದೇ ಚಿಂತೆಯಿಂದ ಏಳಲಾಗದೆ ಬಿದ್ದಿದ್ದಾಳಪ್ಪಾ. ಮನೆಗೆ ಬಾ, ಹೋಗೋಣ” ಎಂದನು.

“ಇಲ್ಲ ಮಾವಾ, ನಾನು ಬರಲಾರೆ. ಎಲ್ಲಾದರೂ ಸಾಯಿ ಅಂತ ಅಮ್ಮ ಬೈದಿದ್ದಾಳೆ. ಅಮ್ಮನ ಮುಖ ನೋಡಲಾರೆನು” ಎಂದು ಕೋಪವನ್ನು ನಟಿಸಿದನು ಗೋವಿಂದ.

“ಅದೇನು ಮಾತೋ! ಅಮ್ಮನಾದವಳು ಸಿಟ್ಟಿನಲ್ಲಿ ಬಾಯಿಗೆ ಬಂದ ಹಾಗೆಲ್ಲಾ ಬಯ್ದೆನೇಕೋ ಅಂತ ಈಗ ನರಳುತ್ತಾ ಇದ್ದಾಳೆ. ಕಣ್ಣ ಮೇಲೆ ಕಣ್ಣಿಟ್ಟು ನಿನ್ನನ್ನು ಕಾಯುತ್ತಾ ಇದ್ದಾಳೆ, ನೀನು ಬಾರದೆ ಹೋದರೆ ಆಕೆ ಬದುಕುವುದೇ ಕಷ್ಟ!” ಎಂದನು ರಾಜಾರಾಂ.

ಈ ವಿಧವಾಗಿ ಗೋವಿಂದನೊಂದಿಗೆ ನಾಟಕದ ಸಂಭಾಷಣೆಗಳನ್ನು ಉರುಹಾಕಿಸಿದ ಮೇಲೆ, ಇದನ್ನು ಚೆನ್ನಾಗಿ ಕಂಠಸ್ಥ ಮಾಡಿಕೋ ಎಂದು ಹೇಳಿ ರಾಜಾರಾಂ ಹೊರಟುಹೋದನು. ಗೋವಿಂದನು ಅಲ್ಲಿರುವ ಬಾವಿಯ ಹತ್ತಿರ ಕೈ ಕಾಲು ಮುಖ ತೊಳೆದುಕೊಂಡು, ಮನೆಯೊಳಗೆ ಹೋಗಲು ಹೊರಟಾಗ, ಶಿಥಿಲಗೋಡೆಯ ಖಿಂಡಿಯೊಳಗಿನಿಂದ ಸಣ್ಣ ಚಪ್ಪಾಳೆಯ ಸದ್ದು ಕೇಳಿಸಿತು. ಗೋವಿಂದನು ಅದುರಿಬಿದ್ದು ಏನೋ ಭಯದಿಂದ ಆ ಕಡೆಗೆ ನೋಡಿ ಹಾಗೆಯೇ ನಿಂತನು.

“ನಿನ್ನನ್ನೇಕರೆಯೋದು! ಕತ್ತಲೆಯಲ್ಲಿ ಪಿಶಾಚಿ ಅಂದುಕೊಂಡೆಯಾ? ನಾನು ಭೂತ ಪಿಶಾಚಿ ಅಲ್ಲ! ಸಮೀಪ ಬಾ!” ಎಂದು ಗೊಗ್ಗರವಾದ ಕಂಠಸ್ವರ ಖಿಂಡಿಯೊಂದರ ಕಡೆಯಿಂದ ಕೇಳಿಸಿತು.

ಆಗ ಗೋವಿಂದನಿಗೆ ಸ್ವಲ್ಪ ಧೈರ್ಯ ಬಂತು. ಆ ಖಿಂಡಿಯ ಹತ್ತಿರ ಹೋಗಿ ನಿಂತು ಬಗ್ಗಿ ಪರೀಕ್ಷಿಸಿ ನೋಡಿದನು. ಆಚೆಯ ಬದಿಯಲ್ಲಿ ಬೆಳ್ಳಗಿನ ತಲೆಕೂದಲು, ಗಡ್ಡ ಮೀಸೆಗಳಿಂದ ಮುದುಕನ ಮುಖ ಕಾಣಿಸಿತು, ಗಂಭೀರದಾಗಿತ್ತು ಆ ಮುಖ.

“ಎಂಥಾ ಹುಡುಗ ನೀನು? ನಿನ್ನ ತಾಯಿ ಸಾಯುವ ಸ್ಥಿತಿಯಲ್ಲಿದ್ದಾಳೆಂದು ಸೋದರ ಮಾವ ಹೇಳಿದರೆ, ಅಷ್ಟು ಒತ್ತಾಯ ಮಾಡಿ ಕರೆದೊಯ್ಯಲು ಬಂದರೆ ಬರಲಾರೆನೆಂದು ಅಷ್ಟು ಹಟಮಾಡುವಿ ಏಕೋ? ತಪ್ಪು. ಕೂಡಲೇ ಹೋಗಿ ತಾಯಿಯನ್ನು ನೋಡು!” ಎಂದನು ಆ ವೃದ್ಧ.



ಈ ಮುದುಕನು ನಾಟಕದೊಳಗಿನ ಸಂಭಾಷಣೆಗಳನ್ನು ಕೇಳಿ, ಅದು ಯಥಾರ್ಥವೆಂದೇ ತಿಳಿದ ಹಾಗಿದೆ, ಎಂದು ಗೋವಿಂದನಿಗೆ ಅರ್ಥವಾಯಿತು. ಮುದುಕನ ತಿಳುವಳಿಕೆಗೆ ಸ್ವಲ್ಪ ರಂಗೇರಿಸೋಣವೆಂದುಕೊಂಡು, "ಇಲ್ಲಬಿಡಿರೀ ! ನಿಮಗೆ ಗೊತ್ತಿಲ್ಲ ನನ್ನ ಅಮ್ಮನ ಸಂಗತಿ. ಅದೆಲ್ಲಾ ಸುಳ್ಳು. ಎಷ್ಟು ಒತ್ತಾಯ ಮಾಡಿದರೂ ನಾನು ಹೋಗಲಾರೆ. ಹೌದು, ನಾನು ಹೋಗದಿದ್ದರೆ ನಿಮಗಾಗುವ ನಷ್ಟವೇನು ?" ಎಂದು ಕೇಳಿದನು.

ವೃದ್ಧನು ಒಂದೆರಡು ಕ್ಷಣ ಏನೋ ಯೋಚಿಸಿ, "ಅದುವೋ ? ಕೇಳಪ್ಪ. ಮಗನಾದವನಿಗೆ ತಾಯಿಯ ಮೇಲೆ ಅಷ್ಟು ಕೋಪ ಒಳ್ಳೆಯದಲ್ಲ. ಪಕ್ಕದಲ್ಲಿರುವ ಈ ದೊಡ್ಡ ಅರಮನೆ ನನ್ನದೇ. ನಾನೂ ನಿನ್ನ ಹಾಗೆಯೇ ಚಿಕ್ಕತನದಲ್ಲಿ ತಾಯಿ ಬಯ್ದಳೆಂದು ಮನೆಯಿಂದ ಓಡಿ ಹೋದವನೇ. ಆ ನನ್ನ ತಾಯಿ ನನ್ನ ಹೆಸರನ್ನೇ ಕನವರಿಸಿಕೊಂಡು ಪ್ರಾಣಬಿಟ್ಟಳು. ಆಮೇಲೆ ನಾನು ಮನೆಗೆ ಹೋದೇ ಅಂದುಕೋ. ಏನು ಲಾಭ ಹೇಳು ?" ಎಂದನು.

ಹೀಗೆ ಮಾತಾಡುವವನು ಆಚೆ ಭಾಗದ ಮನೆಯ ಒಡೆಯನಾದ ಜಮೀನ್ದಾರನೇ ಎಂದು ಸ್ಪಷ್ಟವಾಗಿ ತಿಳಿಯಿತು ಗೋವಿಂದನಿಗೆ. ಅಷ್ಟರೊಳಗೆ ಮಿಂಚಿನಂತೆ ಒಂದು ಆಲೋಚನೆಯೂ ಬಂದಿತು.

"ಆದರೆ ಏನು ಮಾಡಲಿ ಸ್ವಾಮೀ ! ನಮ್ಮದು ಹೊಟ್ಟೆಗೂ ಬಟ್ಟೆಗೂ ಸರಿಯಾಗಿ ಇಲ್ಲದಂಥ ಬಡ ಕುಟುಂಬ. ಹಣ ಸಂಪಾದಿಸೋಣವೆಂತಲೇ ನಾನು ಈ ಪಟ್ಟಣಕ್ಕೆ ಬಂದಿದ್ದೇನೆ. ನನ್ನ ಗ್ರಾಮ ಸಮೀಪದಲ್ಲೇನಿಲ್ಲ. ಇಲ್ಲಿಗೆ ಬಹಳ ದೂರ. ಹೋಗಬೇಕಾದರೆ ಹಣವಿರಬೇಕು. ಬರಿಗೈಯಲ್ಲಿ ಹೋಗಿಬಿಟ್ಟರೆ ಊಟಕ್ಕೆ ಗತಿಯಿಲ್ಲದ ಮನೇಲಿ ತಾಯಿಗೂ ನನಗೂ ಇನ್ನೂ ಕಷ್ಟ" ಎಂದನು ಗೋವಿಂದ ತುಂಬಾ ವಿಚಾರದಲ್ಲಿರುವವನ ಹಾಗೆ.

ಅವನ ಮಾತು ಕೇಳಿ ಜಮೀನ್ದಾರನು ನಗಾಡಿ, "ನಿನ್ನನ್ನು ಅಷ್ಟು ಒತ್ತಾಯ ಮಾಡಿ ಕರೆಯಲು ಬಂದ ಮಾವ ಖರ್ಚಿಗೆ ಸಾಕಷ್ಟು ಹಣದೊಂದಿಗೇ ಬಂದಿದ್ದಾರು, ಆದರೂ ನಿನ್ನನ್ನು ನೋಡಿ ನಿನ್ನ ತಾಯಿಗೆ ಸಂತೋಷವಾಗುವ ಹಾಗೆ ನಾನೂ ಸ್ವಲ್ಪ ಕೊಡುತ್ತೇನೆ, ತಾಳು" ಎಂದು ಜಮೀನ್ದಾರನು ಆ ಖಿಂಡಿಯ ಕಡೆಯಿಂದ ಹೊರಟುಹೋದನು.

ಕಾಲು ಗಂಟೆ ಕಳೆಯಿತು, ಶಿಥಿಲವಾದ ಆ ಗೋಡೆಯ ಬದಿಯಲ್ಲಿ ಕತ್ತಲೆಯಲ್ಲಿ ನಿಂತಿದ್ದ ಗೋವಿಂದನಿಗೆ ಮತ್ತೆ ಸಂಶಯ ಬಂದಿತು. ತನ್ನೊಡನೆ ಮಾತಾಡಿದವನು ಜಮೀನ್ದಾರನೋ ಅವನ ಭೂತವೋ ಎಂದುಕೊಳ್ಳುತ್ತಿರಲು, ಖಿಂಡಿಯ ಹತ್ತಿರ ಅದೇ ವೃದ್ಧ ಜಮೀನ್ದಾರ ಬಂದು, "ಇಕೋಪ್ಪಾ, ಹಿಡಿ, ಇದನ್ನು ತೆಗೆದುಕೊಂಡು ನಾಳೆ ಬೆಳಗ್ಗೆಯೇ ಹೊರಟು ನಿನ್ನ ಗ್ರಾಮಕ್ಕೆ ಹೋಗು." ಎಂಹು ಒಂದು ಸಣ್ಣ ಗಂಟನ್ನು



ಖಿಂಡಿಯೊಳಗಿನಿಂದ ನೀಡಿದನು. ಗೋವಿಂದನು ಆತ್ಮಾತುರದಿಂದ ಅದನ್ನು ತೆಗೆದುಕೊಂಡು ಮನೆಯೊಳಗೆ ಹೋಗಿ ದೀಪದ ಬೆಳಕಿನಲ್ಲಿ ಗಂಟು ಬಿಚ್ಚಿ ನೋಡಿದನು. ಅದರಲ್ಲಿ ಹತ್ತು ಬಂಗಾರದ ಪವನುಗಳು ಹೊಳೆಯುತ್ತಿದ್ದುವು. ಅವನು ಆನಂದದಿಂದ ಅವುಗಳನ್ನು ಮತ್ತೆ ಗಂಟು ಕಟ್ಟಿ, ತನ್ನ ಬಟ್ಟೆಯ ಪೆಟ್ಟಿಗೆಯ ಅಡೀ ಭಾಗದಲ್ಲಿ ಅಡಗಿಸಿಟ್ಟನು.

ಮರುದಿನ ಅವನು ಅಕ್ಕಪಕ್ಕದವರ ಹತ್ತಿರ ವಿಚಾರಿಸಲು, ವೃದ್ಧ ಜಮೀನ್ದಾರರು ಬಹಳ ಉದಾರ ಗುಣವುಳ್ಳವರೆಂದೂ, ಕಷ್ಟದಲ್ಲಿರುವವರಿಗೆ ಧಾರಾಳ ಧನಸಹಾಯಮಾಡುವವರೆಂದೂ ತಿಳಿಯಿತು.

ಅದನ್ನು ತಿಳಿದ ಮೇಲೆ ಗೋವಿಂದನಿಗೆ ಮುದುಕ ಜಮೀನ್ದಾರನಿಂದ ಇನ್ನಿಷ್ಟು ಹಣ ಸಂಪಾದಿಬೇಕೆಂಬ ಆಶೆ ಹುಟ್ಟಿತು. ಆ ದಿನ ಕೂಡಾ ಕತ್ತಲೆಯಾಗುವ ಹೊತ್ತಿಗೆ ರಾಜಾರಾಂ ಬಂದನು. ಇಬ್ಬರೂ ಕೂಡಿ ಮನೆಯ ಹಿಂಬದಿಗೆ ಹೋದರು.

ರಾಜರಾಮನು ನಾಟಕದ ಅನಂತರದ ಸಂಭಾಷಣೆಯನ್ನು ಪ್ರಾರಂಭಿಸಿ, "ಏನಪ್ಪಾ, ಇವತ್ತಾದರೂ ಹಟ ಬಿಟ್ಟೆಯಾ? ನಿನ್ನಮ್ಮ ಕಣ್ಣಿನಲ್ಲಿ ಜೀವ ಇಟ್ಟುಕೊಂಡು ನಿನ್ನ ದಾರೀ ನೋಡುತ್ತಾ ಇದ್ದಾಳೆ ಅಂದರೆ ನಂಬು. ಹಟ ಕೋಪ ಎಲ್ಲಾ ಬಿಟ್ಟು ಮೊದಲು ಹೊರಡು" ಎಂದನು.

"ನೋಡಿ ಮಾವಯ್ಯಾ, ನಾನೊಂದು ನಿಶ್ಚಯ ಮಾಡಿದೆನೆಂದರೆ ಮಾಡಿದ್ದೇ. ಮನಸ್ಸಿನಲ್ಲಿ ಅಂದುಕೊಂಡದ್ದು ಆಗುವವರೆಗೂ ಈ ನಗರ ಬಿಟ್ಟು ಕದಲಲಾರೆ" ಎಂದನು ಗೋವಿಂದ ಪಟ್ಟು ಬಿಡದೆ.

"ಸುಮ್ಮನೆ ತಿರುಗಿ ಬಂದ ನನ್ನನ್ನು ನೋಡಿ ನಿನ್ನಮ್ಮನ ಗತಿ ಏನಾಗುವುದೋ? ನಿನಗೆ ಆರೋಗ್ಯ ಚೆನ್ನಾಗಿಲ್ಲವೆಂದು ಹೇಳಿ, ನಾಲ್ಕೈದು ದಿನ ತಾಳಿ ಕರೆದುಕೊಂಡು ಬರುತ್ತೇನೆ ಅನ್ನುತ್ತೇನೆ. ಯಾವುದಕ್ಕೂ ನಾಳೆ ಮತ್ತೆ ಬರುತ್ತೇನಪ್ಪ" ಎಂದು ರಾಜಾರಾಂ ಅಲ್ಲಿಂದ ಹೊರಟುಹೋದನು.

ಇವತ್ತಿನ ಸಂಭಾಷಣೆಯನ್ನು ಖಿಂಡಿಯಾಚೆಗಿನ ಜಮೀನುದಾರನು ಕೇಳಿರಬೇಕೆಂದು ಗೋವಿಂದನು ಆಶೆಯಿಂದ ತುಸು ನಿಂತನು. ಆಗ ಖಿಂಡಿಯೊಳಗಿನಿಂದ ಜಮೀನ್ದಾರನು, "ಏನಪ್ಪಾ ಇದು? ನಿನ್ನೆ ನಾನು ಹಣ ಕೊಟ್ಟೆನಷ್ಟೆ? ಹೋಗದೆ ಇನ್ನೂ ಹಟ ಹಿಡಿದು ನಿನ್ನ ಮಾವನನ್ನು ಬೇರೆ ಏಕೆ ದಣಿಸುವೆ?" ಎಂದು ಕೇಳಿದನು.

ಗೋವಿಂದನು ಬಹಳ ವಿನಯದಿಂದ, "ತಮ್ಮೊಂದಿಗೆ ಒಂದು ವಿಷಯ ಹೇಳದೆ ಬಿಟ್ಟೆನು. ಈ ಊರಿನಲ್ಲಿ ನಾನು ಮುಳುಗಿ ಹೋಗುವಷ್ಟು ಸಾಲಗಳಿವೆ. ಅವುಗಳನ್ನೆಲ್ಲ ಕೊಟ್ಟು ಮುಗಿಸದೆ ಹೋಗುವುದು ನ್ಯಾಯವಾದೀತೆ?" ಎಂದನು.

"ಹೌದು, ಅದು ಅನ್ಯಾಯವೇ. ಆ ಸಾಲದ ಸಮಾಚಾರ ನಿನ್ನೆಯೇ ಹೇಳಿದ್ದರೆ ಒಳ್ಳೇದಿತ್ತು. ಸ್ವಲ್ಪ ಇರು, ಬಂದೆ" ಎಂದು ಮುದುಕ ಜಮೀ

ನ್ದಾರನು ಒಳಗೆ ಹೋಗಿ, ಮತ್ತೊಂದು ಚಿಕ್ಕ ಗಂಟಿನೊಂದಿಗೆ ತಿರುಗಿ ಬಂದನು.

ಅತ್ಯಾತುರದಿಂದ ಖಿಂಡಿಯೊಳಗೆ ಕೈಹಾಕಿ ಗಂಟನ್ನು ಪಡೆದುಕೊಂಡನು ಗೋವಿಂದ. ಆಗ ಜಮೀನ್ದಾರನು: "ಇನ್ನು ತಡ ಮಾಡಬೇಡ. ಸಾಲ ವೆಲ್ಲಾ ಮುಗಿಸಿ ಬೇಗ ನಿನ್ನ ಊರಿಗೆ ಹೋಗಿ ತಾಯಿಯನ್ನು ನೋಡು. ಮಾಡಿದ ತಪ್ಪಿಗೆ ನಿನ್ನ ತಾಯಿಯ ಹತ್ತಿರ ಕ್ಷಮೆ ಕೇಳಿಕೋ" ಎಂದನು.

ಗೋವಿಂದನು ಮತ್ತೆ ದೀಪದ ಬೆಳಕಿನಲ್ಲಿ ಆ ಗಂಟನ್ನು ಬಿಡಿಸಿ ನೋಡಿದನು. ಈ ಸಾರಿ ಅದರಲ್ಲಿ ಇಪ್ಪತ್ತು ಚಿನ್ನದ ನಾಣ್ಯಗಳಿದ್ದುವು. ಅವನು ಅವು ಗಳನ್ನು ಕೂಡಾ ತನ್ನ ಪೆಟ್ಟಿಗೆಯ ಬುಡದಲ್ಲಿ ಭದ್ರ ವಾಗಿಟ್ಟನು.

ಹೀಗೆ ಅವನ ಹತ್ತಿರ ಮೂವತ್ತು ಪವನುಗಳು ಸೇರಿದುವು. ಆಶೆ ಹೆಚ್ಚಿತು, ಇನ್ನೇನಾದರೂ ಹೇಳಿ ಮುದುಕ ಜಮೀನ್ದಾರನಿಂದ ಇನ್ನಿಷ್ಟು ಸಂಪಾದಿಸ ಬೇಕೆಂಬ ದುರಾಶೆಯುಂಟಾಯಿತು ಗೋವಿಂದನಿಗೆ. ಆದಕ್ಕೆ ಏನು ಮಾಡೋಣವೆಂದು ಚಿಂತಿಸುತ್ತಾ, ಹಗಲಿಡೀ ಮನೆಬಿಟ್ಟು ಕದಲದೆ ಆಲೋಚನೆ ಮಾಡಿದನು. ಆ ದಿನ ಸಾಯಂಕಾಲ ರಾಜಾರಾಂ ಬಂದ ಕೂಡಲೇ, "ಗೋವಿಂದಾ, ನಾಟಕದ ಅಂತ್ಯದಲ್ಲಿ ಚಿಕ್ಕದೊಂದು ಬದಲಾವಣೆ ಮಾಡಬೇಕಾಗಿದೆ. ತಾಯಿಯ ಪಾತ್ರ ಸತ್ತುಹೋಗುವುದರ ಮೂಲಕ, ಮಗನಲ್ಲಿ ತುಂಬಾ ಪಶ್ಚಾತ್ತಾಪ ಬರುವ ಹಾಗೆ ಮಾಡಬೇಕೆಂದಿದೆ. ಆ ಬದಲಾವಣೆಯಲ್ಲಿ ಬರುವ ಸಂಭಾಷಣೆ ಹೇಳುತ್ತೇನೆ, ನಡೆ" ಎಂದು ಗೋವಿಂದ ನೊಂದಿಗೆ ಮನೆಯ ಹಿಂಬದಿಗೆ ಹೋಗಿ, ಮಾವನ ಪಾತ್ರದಲ್ಲಿ ರಾಜಾರಾಂ, "ಎಲ್ಲಾ ಮುಗಿದುಹೋಯಿ ತಪ್ಪಾ. ತಾಯಿ ಮಗನ ಋಣ ತೀರಿಹೋಯಿತು! ನಿನಗೆ ಆರೋಗ್ಯ ಸರಿಯಿಲ್ಲವೆಂದು ಹೇಳಿದ ಕೂಡಲೇ, ನಿನ್ನಮ್ಮ ಅಂಥಾ ಜ್ವರದಲ್ಲಿ ಕೂಡಾ ಎದ್ದು ಬಾಡಿಗೆಯ



ಬಂಡಿಯಲ್ಲಿ ಹೊರಟೇಬಿಟ್ಟಳು. ಅದು ಯಮ ಲೋಕಕ್ಕೇ ಆಯಿತು, ಬಂಡಿ ಗ್ರಾಮವನ್ನು ದಾಟು ವಷ್ಟರಲ್ಲಿ ಆಕೆ ನಿನ್ನನ್ನೇ ಜಪಿಸುತ್ತ ಕಣ್ಣು ಮುಚ್ಚಿ ಬಿಟ್ಟಳು. ಇನ್ನು ನೀನು ಬರಬೇಕಾದ್ದು ಅವಳ ಉತ್ತರ ಕ್ರಿಯೆಗೆ, ಅಷ್ಟೇ!" ಎಂದನು ದುಃಖದ ಗದ್ಗದ ಕಂಠದಿಂದ.

ಆಮೇಲೆ ಗೋವಿಂದನ ವಚನಗಳನ್ನು ಹೇಳಿ ಕೊಡುವಷ್ಟರೊಳಗೆ, ಶಿಥಿಲ ಗೋಡೆಯ ಖಿಂಡಿ ಯಾಚೆಯಿಂದ, "ಏ ದುಷ್ಟ ಹುಡುಗಾ! ಹೀಗೆಯೇ ನಡೆದೀತೆಂದು ನನಗೆ ಮೊದಲೇ ಅನುಮಾನವಾಗಿತ್ತು! ಬರುತ್ತೇನೆ ಇರು!" ಎಂದು ಕೂಗಿ ಹೇಳಿದ ಗೊಗ್ಗರ ಕಂಠಧ್ವನಿ ಕೇಳಿತು.

ಆ ಶಬ್ದ ಕೇಳಿ ರಾಜಾರಾಂ ಗಾಬರಿಯಾಗಿ, "ಏನಪ್ಪಾ ಆ ಶಬ್ದ? ಈ ಕತ್ತಲೆಯಲ್ಲಿ ಯಾರದು? ಪಿಶಾಚಿ ಗಿಶಾಚಿ ಅಲ್ಲವಷ್ಟೇ?" ಎಂದನು ತನಗೆ ತಾನೇ. ಗೋವಿಂದನಿಗೂ ಗಾಬರಿಯೂ ಭಯವೂ

ಆಗಿ ಬಾಯಿಯಿಂದ ಮಾತೇ ಹೊರಡಲಿಲ್ಲ. ಅವನು ನಡುಗುತ್ತಾ ಮನೆಯೊಳಗೆ ಬರುವಾಗ, ಅಲ್ಲಿಗೆ ಮುದುಕ ಜಮೀನ್ದಾರನೂ, ಅವನ ಹಿಂದೆ ದೊಣ್ಣೆಗಳೊಂದಿಗೆ ಇಬ್ಬರು ಧಾಂಡಿಗ ಬಂಟರೂ ಒಳಗೆ ಬರುವುದು ಕಂಡಿತು.

ಜಮೀನ್ದಾರನು ಗೋವಿಂದನನ್ನು ಕೋಪದಿಂದ ನೋಡುತ್ತ, "ಕಳ್ಳಾ ! ಮನೆಗೆ ಹೋಗಿ ರೋಗದಲ್ಲಿರುವ ತಾಯಿಯನ್ನು ನೋಡುವಂತೆ ಹೇಳಿ ನಿನಗೆ ಮೂವತ್ತು ಪವನುಗಳನ್ನು ಕೊಟ್ಟೆ ! ಆದರೂ ನೀನು ಹೋಗದೆ ನಿನ್ನ ತಾಯಿಯ ಸಾವಿಗೆ ಕಾರಣನಾದೆಯಾ ! ನಿನ್ನಂಥವನು ಇನ್ನು ಭೂಮಿಯಲ್ಲಿರಬಾರದು. ತಾಯಿಯಿರುವಲ್ಲಿಗೇ ಹೋಗು !" ಎಂದು ತನ್ನ ಬಂಟರಿಗೆ ಸನ್ನೆ ತೋರಿಸಿದನು.

ಜಮೀನ್ದಾರನ ಬಂಟರು ಮನೆಯೊಳಗೆಲ್ಲಾ ಹುಡುಕಿ, ಗೋವಿಂದನ ಬಟ್ಟೆಗಳ ಪೆಟ್ಟಿಗೆಯ ಅಡಿಯಿಂದ ಮೂವತ್ತು ಪವನುಗಳಿರುವ ಗಂಟನ್ನು ಹೊರಗೆಳೆದರು. "ಇಷ್ಟಕ್ಕೇ ನಿನ್ನನ್ನು ಬಿಟ್ಟುಬಿಡುತ್ತೇನೆ, ಏನಾದರೂ ಸಾಯಿ !" ಎಂದು ಹೇಳಿ ಜಮೀನ್ದಾರನು ಪವನುಗಳನ್ನು ತೆಗೆದುಕೊಂಡು ತನ್ನ ಬಂಟರೊಂದಿಗೆ ಹೊರಟುಹೋದನು.

ಈ ಘಟನೆಯಿಂದ ಏನು ನಡೆಯಿತೆಂದು ರಾಜಾರಾಮನಿಗೆ ಅರ್ಥವಾಗಿಹೋಯಿತು. ಅವನು ಕೋಪದಿಂದ ಹಲ್ಲು ಕಡಿಯುತ್ತ ಗೋವಿಂದನನ್ನು ನೋಡಿ, "ನಾಟಕದೊಳಗಿನ ಸಂಭಾಷಣೆಗಳನ್ನು ಕೇಳಿ ನಿಜವೆಂದುಕೊಂಡು ಅವರು ನಿನಗೆ ಅಷ್ಟು ಪವನುಗಳನ್ನು ಕೊಟ್ಟರು ಹೌದಾ ? ನನಗೆ ಸಹಾ ಹೇಳದೆ ಮುಚ್ಚಿಟ್ಟುಕೊಂಡೆಯಾ ? ಆ ಸಂಭಾಷಣೆ ಹೆಣೆದವನು ನಾನು. ನನಗೂ ಆ ಹಣದಲ್ಲಿ ಭಾಗಕೊಡಬೇಕಾಗುತ್ತೆ ಅಂತ ತಾನೇ ಮುಚ್ಚಿಟ್ಟೇ ! ದ್ರೋಹಿ! ನಿನ್ನಂಥವನಿಗೆ ಇನ್ನು ನನ್ನ ನಾಟಕದಲ್ಲಿ ಸ್ಥಳವಿಲ್ಲ. ದುರಾಶೆಯ ಪುಂಜನಾದ ನೀನು ಇನ್ನು ನನಗೆ ಮುಖ ತೋರಿಸಬೇಡ, ನಡೆ" ಎಂದು ಬಯ್ದು ಹೊರಟುಹೋದನು.

ಗೋವಿಂದನಿಗೆ ಪಶ್ಚಾತ್ತಾಪವಾಯಿತು. ತಾನು ಹೆತ್ತ ತಾಯಿಗೂ, ದಯಾಧರ್ಮವಿರುವ ವೃದ್ಧ ಜಮೀನ್ದಾರರಿಗೂ ಮೋಸ ಮಾಡಿದೆ. ಇರುವ ಊರಿನಲ್ಲೇ ಏನಾದರೊಂದು ವ್ಯಾಪಾರಮಾಡಿಕೊಂಡಿರಲು ತಾಯಿ ಎರಡು ಚಿನ್ನದ ಬಳೆಗಳಲ್ಲಿ ಒಂದನ್ನು ತನಗೆ ಕೊಟ್ಟರೆ, ಅದರೊಂದಿಗೆ ನಗರಕ್ಕೆ ಬಂದು ನಾಟಕದ ಹುಚ್ಚಿನಲ್ಲಿ ಕಾಲಕಳೆಯುತ್ತಿದ್ದೇನೆ!

ತಾನೀಗ ಮನೆಗೆ ಹೋದರೆ ತಾಯಿಗೆ ಆನಂದವಾಗುತ್ತದೆ. ಇನ್ನು ತಾಯಿ ಹೇಳಿದಂತೆ ಕೇಳಿಕೊಂಡು ಅವಳ ಹತ್ತಿರವೇ ಇರಬೇಕೆಂದು ಗೋವಿಂದನು ನಿಶ್ಚಯಿಸಿ, ಮರುದಿನವೇ ತನ್ನ ಊರಿಗೆ ಹೊರಟನು.





# ಲೋಭಿಯ ದಾನಗುಣ

ಹಿಂದೆ ಸೀಮಾಪುರದಲ್ಲಿ ಪ್ರತಾಪರಾಯನೆಂಬೊಬ್ಬ ಜಮೀನ್ದಾರನಿದ್ದನು. ಬೇಕಾದಷ್ಟು ಸೊತ್ತು ಅವನಿಗಿದ್ದರೂ ಪರಮ ಲೋಭಿ. ಅವನ ಲೋಭ ಗುಣವು ಸುತ್ತುಮುತ್ತಲ ಗ್ರಾಮಗಳಿಗೂ ಹರಡಿ ಹೆಸರು ಪಡೆದಿತ್ತು. ಹೀಗೆಯೇ ಅವನಿಗೆ ವೃದ್ಧಾಪ್ಯವು ಬಂದಿತು. ಸ್ವಲ್ಪ ಪಾಪಭೀತಿಯೂ, ದೈವಚಿಂತನೆಯೂ ಅವನಲ್ಲಿ ಪ್ರಾರಂಭವಾದುವು.

ಹೀಗಿರುವಾಗ ಒಬ್ಬ ಸನ್ಯಾಸಿ ಸೀಮಾಪುರಕ್ಕೆ ದಯಮಾಡಿಸಿದನು. ಎಲ್ಲರೂ ಅವನಿಗೆ ನಮಸ್ಕಾರ ಮಾಡಲು ಹೋಗುವುದನ್ನು ನೋಡಿ, ಅವನು ನಿಜವಾದ ಸಾಧುವೆಂದು ತಿಳಿದು ಪ್ರತಾಪರಾಯನೂ ಹೋಗಿ ಆತನ ದರ್ಶನ ಮಾಡಿದನು, ಸನ್ಯಾಸಿಗೆ ದೀರ್ಘದಂಡ ನಮಸ್ಕಾರ ಮಾಡಿ, ತಾನು ಸತ್ತು ಹೋದರೆ ಪುಣ್ಯಗತಿ ಬರುವ ಹಾಗೆ ಏನು ಮಾಡಬೇಕೆಂದು ಕೇಳಿದನು ಪ್ರತಾಪರಾಯ. "ಅದು ನಿಮ್ಮಂಥವರಿಗೆ ಬಹು ಸುಲಭ. ಧಾರಾಳವಾಗಿ ದಾನಧರ್ಮ ಮಾಡುತ್ತಾ ಇದ್ದರೆ ಸಾಕು" ಎಂದು ಸನ್ಯಾಸಿ ಅವನಿಗೆ ಸಲಹೆ ಮಾಡಿ ಆಶೀರ್ವದಿಸಿ ಕಳುಹಿಸಿದನು. ಹೀಗೆ ಸನ್ಯಾಸಿಯೊಂದಿಗೆ ಜಮೀನ್ದಾರನು ಹೇಳಿದ ಮಾತನ್ನು ಅಲ್ಲಿಯೇ ಇದ್ದ ಬಡ ಬ್ರಾಹ್ಮಣನೊಬ್ಬನು ಕೇಳಿದ್ದನು. ಮರುದಿನ ಬೆಳಿಗ್ಗೆ ಆ ಬ್ರಾಹ್ಮಣನು ಜಮೀನ್ದಾರ ಪ್ರತಾಪರಾಯನ ಮನೆಗೆ ಭಿಕ್ಷೆಗೆ ಹೋದನು. ಆಗ ಒರಗು ಕುರ್ಚಿಯಲ್ಲಿ ಕುಳಿತಿದ್ದ ಪ್ರತಾಪರಾಯನು ಬೆಲೆ ಬಾಳುವಂಥ ಪಟ್ಟೆವಸ್ತ್ರಗಳನ್ನು ಧರಿಸಿದ್ದನು. ಕೊರಳಲ್ಲಿ ಬಂಗಾರದ ಸರವೂ, ಕೈಬೆರಳುಗಳಲ್ಲಿ ವಜ್ರದ ಉಂಗುರಗಳೂ ಜ್ವಲಿಸುತ್ತಿರಲು ಮಹಾರಾಜನ ಹಾಗಿದ್ದನು. ಅದನ್ನೆಲ್ಲ ನೋಡಿ ತನಗೆ ಬಹುದೊಡ್ಡ ದಾನವು ಲಭಿಸುವುದೆಂದು ಬಡಬ್ರಾಹ್ಮಣನಿಗೆ ಬಹಳ ಆಶೆಯಾಯಿತು.

ಭಿಕ್ಷೆಗೆ ನಿಂತ ಬ್ರಾಹ್ಮಣನನ್ನು ನೋಡಿ ಪ್ರತಾಪರಾಯನು, " ಭಿಕ್ಷೆ ತಾನೇ ? ನಾಳೆ ಬನ್ನಿ " ಎಂದನು.

ಮರುದಿನ ಪ್ರತಾಪರಾಯ ಜಮೀನ್ದಾರರಲ್ಲಿಗೆ ಆ ಬ್ರಾಹ್ಮಣನು ಬಂದು ನಿಂತನು. ಆಗಿನ ಜಮೀನ್ದಾರನನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಜಮೀನ್ದಾರನು ಸಾದಾ ದುಸ್ತಿನಲ್ಲಿ ಸಾಮಾನ್ಯ ಬಡವನಂತೆ ಕಾಣುತ್ತಿದ್ದನು. ಶರೀರದಲ್ಲೆಲ್ಲಿಯೂ ಬಂಗಾರದ ಹೆಸರೇ ಇರಲಿಲ್ಲ. ಅವನು ಬ್ರಾಹ್ಮಣನನ್ನು ನೋಡಿ ನಗುತ್ತ, "ಒಬ್ಬರು ಹೆಚ್ಚು,

ಡಾಕ್ಟರ್ ಬಿ. ಎಸ್. ಮೂರ್ತಿ

ಒಬ್ಬರು ಕಡಿಮೆ ಎಂಬ ಭಾವನೆಯೇ ನನಗಿಲ್ಲ. ಆದುದರಿಂದ ನಾನು ಜಮೀನ್ದಾರೀ ಬರಂಗಿರಂ ಎಲ್ಲಾ ಬಿಟ್ಟು ನಿಮ್ಮ ಹಾಗೇ ಸಾಮಾನ್ಯನಾಗಿ ಬದುಕಲಿದ್ದೇನೆ. ಈಗ ನೀವೂ ನಾನೂ ಒಂದೇ. ಆದ್ದರಿಂದ ನಿಮಗೆ ದಾನ ಮಾಡುವುದೆಂಬ ಮಾತೇ ಇಲ್ಲ!" ಎಂದನು.

ಬಡಬ್ರಾಹ್ಮಣನು ವಿನಯದಿಂದ, "ನೀವು ವೇಷ ಬದಲಾಯಿಸಿದರೂ ಆಸ್ತಿ ನಿಮ್ಮದಲ್ಲದೆ ಹೋಗುತ್ತದೆಯೇ? ನೀವು ನಿಜಕ್ಕೂ ನನಗಿಂತ ದೊಡ್ಡವರೇ. ಆದ್ದರಿಂದ ಈ ಬಡಬ್ರಾಹ್ಮಣನಿಗೆ ಏನಾದರೂ ದಾನಮಾಡಿ ಪುಣ್ಯ ಕಟ್ಟಿಕೊಳ್ಳಬೇಕು, ಸ್ವಾಮೀ" ಎಂದು ಕೇಳಿಕೊಂಡನು.

ಜಮೀನ್ದಾರನು ಎರಡು ಮೂರು ಸಾರಿ ತಲೆಯಾಡಿಸಿ, ಕಣ್ಣುಮುಚ್ಚಿ ಮತ್ತೆ ಬಿಡಿಸಿ ಬ್ರಾಹ್ಮಣನನ್ನು ನೋಡಿ, "ಯಾವುದಕ್ಕೂ ನಾಳೆ ಬನ್ನಿ" ಎಂದು ಹೇಳಿ ಕಳುಹಿಸಿಬಿಟ್ಟನು.

ಮತ್ತೆ ಮರುದಿನ ಬಂದ ಬ್ರಾಹ್ಮಣನು ಜಮೀನ್ದಾರನನ್ನು ನೋಡಿ ಇನ್ನಷ್ಟು ಆಶ್ಚರ್ಯಪಡತೊಡಗಿದನು. ಈಗ ಜಮೀನ್ದಾರ ಪ್ರತಾಪರಾಯನು ಕಾಷಾಯ ವಸ್ತ್ರಗಳನ್ನು ಧರಿಸಿಕೊಂಡಿದ್ದನು.

ಭಿಕ್ಷೆಗೆ ತಪ್ಪದೆ ಬಂದ ಬ್ರಾಹ್ಮಣನನ್ನು ನೋಡಿ ಜಮೀನ್ದಾರನು, "ನಾನು ಸನ್ಯಾಸ ತೆಗೆದುಕೊಂಡು ಬಿಟ್ಟೆನು. ಈ ಪ್ರಪಂಚದಲ್ಲಿ ಹಣಕ್ಕೂ ನನಗೂ ಇನ್ನೇನೂ ಸಂಬಂಧವಿಲ್ಲ" ಎಂದನು.

"ಹಾಗಾದರೆ ನಿಮ್ಮ ಆಸ್ತಿ ಎಲ್ಲಾ ಏನು ಮಾಡಿದಿರಿ ಸ್ವಾಮೀ?" ಎಂದು ಬಡಬ್ರಾಹ್ಮಣನು ಕೇಳಿದನು.

"ನಾನು ಬಿಟ್ಟುಕೊಟ್ಟ ಮೇಲೆ ಅದು ನನ್ನ ಮಕ್ಕಳಿಗೇ ಸೇರುತ್ತದಷ್ಟೆ? ನನ್ನದೆಂದು ಹೇಳಲು ನನ್ನ ಹತ್ತಿರ ಏನೂ ಇಲ್ಲ."

"ಸರಿ, ತಮ್ಮ ಕುಮಾರರನ್ನೇ ಕೇಳುತ್ತೇನೆ" ಎಂದು ಬ್ರಾಹ್ಮಣನು ಅಲ್ಲಿಂದ ಕದಲಲು ನೋಡಿದನು.

ಪ್ರತಾಪರಾಯನು ಅವನನ್ನು ಹೋಗದಂತೆ ತಡೆದು, "ಅವರು ನನ್ನಿಂದ ತಮಗೆ ಸಂಕ್ರಮಿಸಿದ ಆಸ್ತಿಯಲ್ಲಿ ದಾನಧರ್ಮ ಮೊದಲಾದ ವೃಥಾ ಖರ್ಚುಗಳನ್ನು ಮಾಡಲಾರೆವೆಂದು ಪ್ರತಿಜ್ಞೆ ಮಾಡಿದ್ದಾರೆ, ತಂದೆಗೆ ಕೊಟ್ಟ ಮಾತು ಮೀರುವವರಲ್ಲ ನನ್ನ ಮಕ್ಕಳು!" ಎಂದನು.

ಬಡಬ್ರಾಹ್ಮಣನು ದೊಡ್ಡದೊಂದು ಉಸಿರು ಬಿಟ್ಟು ಅಲ್ಲಿಂದ ಹೊರಟನು, ಇದು ನಡೆದ ಮೇಲೆ ಇನ್ನು ಯಾಚಕರಾರೂ ತನ್ನ ಬಳಿಗೆ ಬಾರರೆಂದು ಸಮಾಧಾನಪಟ್ಟು, ಆ ರಾತ್ರಿ ಕಣ್ಣುತುಂಬ ನಿದ್ದೆ ಮಾಡಿದನು ಆ ಮಹಾಲೋಭಿ ಜಮೀನ್ದಾರ.








ಕೃಷ್ಣನ ಔನ್ನತ್ಯವು ಬೆಳೆಯುತ್ತಿದ್ದಂತೆಯೇ ಕೃಷ್ಣನ ಶತ್ರುಗಳು ಕೂಡಾ ಬೆಳೆಯುತ್ತಿದ್ದರು. ಆ ಶತ್ರುಗಳಲ್ಲಿ ಮುಖ್ಯಸ್ಥರಾದ ಶಿಶುಪಾಲ, ಜರಾಸಂಧರ ಕೂಟಗಳೊಂದಿಗೆ ದುಷ್ಟರೂ, ದುರ್ಮಾರ್ಗಿಗಳೂ ಆದ ಅನೇಕ ರಾಜರು ಸೇರಿಕೊಂಡರು. ಪೌಂಡ್ರಕನೆಂಬ ಕರೂಶ ದೇಶದ ರಾಜನು ಕೃತ್ರಿಮವಾದ ಮರದ ಕೈಗಳನ್ನು ಜೋಡಿಸಿಕೊಂಡು, ಶಂಖ, ಚಕ್ರಗಳನ್ನು ಮಾಡಿಸಿ ಆ ಕೈಗಳಿಗೆ ಅಂಟಿಸಿ, ದೊಡ್ಡದೊಂದು ಗದೆಯನ್ನು ಕೂಡಾ ಹಿಡಿದು, ತಾನೇ ವಿಷ್ಣುವಿನ ಅವತಾರವೆಂದೂ, ತಾನೇ ವಾಸುದೇವನೆಂದೂ ಪ್ರಗಲ್ಭತೆಯಿಂದ ಸಾರಿಕೊಂಡಿದ್ದನು. ಶಿಶುಪಾಲನ ಮತ್ತೊಬ್ಬ ತಮ್ಮನಾದ ಸಾಲ್ವನು ಸೌಭಕವೆಂಬ ವಿಮಾನದಲ್ಲಿ ದ್ವಾರಕಾ ನಗರದ ಮೇಲೆ ವಿಹರಿಸುತ್ತ, ಜಗಳಕ್ಕೆ ಕಾಲು ಕೆದರಿಕೊಂಡಿದ್ದನು. ಪೂರ್ವದಿಕ್ಕಿನಲ್ಲಿ ನರಕಾಸುರನು ಅಟ್ಟಹಾಸ ಮಾಡಿಕೊಂಡಿದ್ದನು. ದಕ್ಷಿಣದಲ್ಲಿ ಬಲಿಚಕ್ರವರ್ತಿಯ ಕುಮಾರನಾದ ಬಾಣಾಸುರನು ಶಿವನ ರಕ್ಷಣೆಯ ಬಲದಿಂದ ನಿರ್ಭೀತನಾಗಿ ಶೋಣಪುರವನ್ನು ರಾಜಧಾನಿ ಮಾಡಿಕೊಂಡು ರಾಕ್ಷಸ ಪರಿಪಾಲನೆ ಸಾಗಿಸುತ್ತಿದ್ದನು, ಅವನ ಶಾಸನಗಳು ನೆರೆಹೊರೆಗಳಿಗೆಲ್ಲಾ ವಿಸ್ತರಿಸಿಕೊಂಡಿದ್ದುವು.

ಇನ್ನೊಂದು ಕಡೆ ಕಾಲಯವನನ ತಮ್ಮನಾದ ಕಾಲಾಂತಕನು, ತನಗೆ ಜೀವದೊಂದಿಗಿರುವ ಯಾವ ಪ್ರಾಣಿಯಿಂದಲೂ ಭಯವಿಲ್ಲವೆಂಬ ದೈವಜ್ಞವಚನದ ವಿಶ್ವಾಸದ ಧಿಮಾಕಿನಲ್ಲಿ ಮ್ಲೇಚ್ಛ ಯವನರ ಸೈನ್ಯಗಳೊಂದಿಗೆ ದಾರುಣವಾಗಿ ರಕ್ತಪಾತ ನಡೆಸುತ್ತ, ದೇವತಾ ವಿಗ್ರಹಗಳನ್ನೂ ಶಿಲ್ಪಗಳನ್ನೂ ಧ್ವಂಸ ಮಾಡುತ್ತ, ದೇಶಗಳನ್ನು ಕೊಳ್ಳೆ ಹೊಡೆಯುತ್ತ ಕೃಷ್ಣನನ್ನು ಸಂಹರಿಸುವ ಗುರಿಯಿಂದಲೇ ಇದ್ದನು.

ಅವನು ಹಾಗೆ ದಂಡಯಾತ್ರೆ ಮಾಡಿಕೊಂಡು ಗಾಂಧಾರ ಸೀಮೆಯಲ್ಲಿ, ಹಾಲ್ಗಲ್ಲಿನಲ್ಲಿ ಕಡೆಯಲ್ಪಟ್ಟ ಜಗನ್ಮೋಹನವಾದ ಮೋಹಿನಿಯ ಶಿಲ್ಪವನ್ನು ನೋಡಿ ಅದರ ಸೌಂದರ್ಯದಿಂದ ವಿವಶನಾದನು. ಆ ಮೋಹಿನೀ ವಿಗ್ರಹವನ್ನು ಕೃಷ್ಣನು ವಿಶ್ವ

೧೭. ಕೃಷ್ಣವಿಜಯ



ಕರ್ಮನಿಂದ ಮಾಡಿಸಿ, ತನ್ನ ಯೋಗ ಮಾಯಾಗ್ನಿಯನ್ನು ಅದರೊಳಗೆ ಅಡಗಿಸಿಟ್ಟಿರುವನೆಂಬ ರಹಸ್ಯವು ಕಾಲಾಂತಕನಿಗೆ ತಿಳಿದಿರಲಿಲ್ಲ,

ಆ ಸಾಲಭಂಜಿಕಾ ವಿಗ್ರಹವನ್ನು ಕಾಲಾಂತಕನು ಎತ್ತಿಕೊಂಡು ಹೋಗಿ ತನ್ನ ಅಂತಃಪುರ ಮಂದಿರದೊಳಗೆ ಇಟ್ಟುಕೊಂಡು, ಆ ಶಿಲ್ಪ ಸುಂದರಿಗೆ ಜೀವ ಬಂದರೆ ತಾನೆಂತಹ ಅದೃಷ್ಟಶಾಲಿಯೋ ಎಂದುಕೊಳ್ಳುತ್ತ ಎಂಜಲು ನುಂಗುತ್ತಿದ್ದನು.

ಒಂದು ದಿನ ರಾತ್ರಿ ಮುರಳೀಗಾನಕ್ಕೆ ತಕ್ಕ ಹಾಗೆ ಅಂದುಗೆಗಳ ಝಣಕು ನಾದಗಳೂ ಕೇಳಿಸುತ್ತಿರಲು, ಕಾಲಾಂತಕನಿಗೆ ಎಚ್ಚರವಾಯಿತು. ವಿಗ್ರಹಕ್ಕೆ ಬದಲಾಗಿ ನಾಟ್ಯವಾಡಿಕೊಂಡಿದ್ದ ಅದ್ಭುತ ಸುಂದರಿಯನ್ನು ನೋಡಿದನು. ಮೋಹಾವೇಶದಿಂದ ಕಾಲಾಂತಕನು ತಟಕ್ಕನೆದ್ದು ಅವಳ ಕೈಗಳನ್ನು ಹಿಡಿದು ತನ್ನ ಕೊರಳಿನ ಸುತ್ತಲೂ ಬಳಸಿಕೊಂಡನು. ಮರುಕ್ಷಣದಲ್ಲಿ ಅವಳು ಶಿಲಾ ವಿಗ್ರಹವಾಗಿ ನಿಂತಳು. ವಿಗ್ರಹದ ಬಾಹುಬಂಧದಲ್ಲಿ ಕೊರಳು ಬಿಗಿದುಕೊಂಡು ಕಾಲಾಂತಕನು ಚಡಪಡಿಸುತ್ತ, ಬೆಂಕಿಯ ಕೆಂಡವಾಗಿ ಹಾಗೆಯೇ ಕರಿಯಾಗಿ ಬಿದ್ದು ರಾಶಿಯಾದನು. ವಿಗ್ರಹದ ಕೈಗಳೂ ಉರಿದು ಮುರಿದುಬಿದ್ದುವು. ಮೊಂಡಿ ಮೋಹಿನೀ ವಿಗ್ರಹ ಮಾತ್ರ ಉಳಿದಿತ್ತು.

ಕಾಲಾಂತಕನ ಸೇನೆಗಳನ್ನು ಕೃಷ್ಣನು ಹೊಡೆದೋಡಿಸಿದನು. ಆ ಸಮಯದಲ್ಲಿ ಅಗ್ನಿ ಪರ್ವತವು ಸಿಡಿದು ಯವನ ರಾಜ್ಯವನ್ನೇ ಧ್ವಂಸ ಮಾಡಿತು.

ಪಶ್ಚಿಮ ದಿಕ್ಕಿನ ಮ್ಲೇಚ್ಛ ಯವನರ ಕಾಟ ತೊಲಗಿದ ಮೇಲೆ, ಪೂರ್ವ ದಿಕ್ಕಿನ ಪ್ರಾಗ್ಜ್ಯೋತಿಷವನ್ನು ಪಾಲಿಸುವ ನರಕಾಸುರನ ವಿಜೃಂಭಣೆಗಳು ಇನ್ನಷ್ಟು ಪೀಡಾಕರವಾಗಿ ಸಾಧು ಸಜ್ಜನರನ್ನು ಹಾಹಾಕಾರಗೊಳಿಸಿಕೊಂಡಿದ್ದುವು.

ಹಿಂದೆ ವಿಷ್ಣು ವರಾಹಾವತಾರದಿಂದ ಭೂದೇವಿಯನ್ನು ಉದ್ಧರಿಸುವ ಸಂದರ್ಭದಲ್ಲಿ ಭೂದೇವಿಗೆ ಜನಿಸಿದ ಪುತ್ರನೇ ನರಕಾಸುರ. ಅವನು ಪ್ರಾಗ್ಜ್ಯೋತಿಷ ಪುರವನ್ನು ರಾಜಧಾನಿ ಮಾಡಿಕೊಂಡು, ಅಸುರ ಸೇನೆಗಳೊಂದಿಗೆ ದೇವಲೋಕದ ಮೇಲೆ ದಾಳಿಮಾಡಿ ಜಯಿಸಿ, ದೇವತೆಗಳನ್ನು ತನ್ನ ಪಾದಾಕ್ರಾಂತ ಮಾಡಿಕೊಂಡಿದ್ದನು. ದೇವಮಾತೆಯಾದ ಅದಿತಿಯ ಕರ್ಣಕುಂಡಲಗಳನ್ನು ಎಳೆದುಕೊಂಡು ಬಂದಿದ್ದನು. ಮುನಿಗಳನ್ನೂ ಸಾಧುಗಳನ್ನೂ ಹಿಂಸಿಸುವುದು ಅವನಿಗೊಂದು ಆಟ. ಹದಿನಾರು ಸಾವಿರ ಮಂದಿ ಕನ್ಯೆಯರನ್ನು ತಂದು ಸೆರೆಮನೆಯೊಳಗೆ ಕೂಡಿಹಾಕಿದ್ದನು.

ದೇವತೆಗಳೂ ಮುನಿಗಳೂ ಕೃಷ್ಣನ ಬಳಿಗೆ ಬಂದು ನರಕಾಸುರನ ಪೀಡೆ ತೊಲಗಿಸಬೇಕೆಂದು ಪ್ರಾರ್ಥಿಸಿದರು. ಕೃಷ್ಣನು ಅವರಿಗೆ ಅಭಯವಿತ್ತು, ಆ ಕಾರ್ಯಕ್ಕೆ ಹೊರಡಲು ಸಿದ್ಧನಾದಾಗ ಸತ್ಯಭಾಮೆ ತಾನೂ ಬರುವೆನೆಂದು ಕೃಷ್ಣನೊಂದಿಗೆ ಹೊರಟಳು-ತಾಯಿಯಾದ ಭೂದೇವಿಯಿಂದ ಗಾಯಪಟ್ಟ

ರೇನೇ ನರಕಾಸುರನಿಗೆ ಸಾವು ಬರಲು ಸಾಧ್ಯವೆಂಬ ವರವು ಅವನಿಗಿದ್ದಿತು. ಸತ್ಯಭಾಮೆ ಭೂದೇವಿಯ ಅಂಶದಲ್ಲೇ ಹುಟ್ಟಿದವಳು.

ಕೃಷ್ಣನು ಸತ್ಯಭಾಮೆಯೊಂದಿಗೆ ಗರುಡಾರೂಢ ನಾಗಿ ಪ್ರಾಗ್ಜ್ಯೋತಿಷಪುರದ ಮೇಲೆ ದಾಳಿ ಮಾಡಿ, ಅಸುರ ಸೇನೆಗಳನ್ನು ಸಂಹಾರ ಮಾಡಿದನು.

ನರಕಾಸುರನು ಮದಗಜದ ಮೇಲೇರಿ ಕೃಷ್ಣ ನನ್ನು ಇದಿರಿಸಿದನು. ಯುದ್ಧ ಮಾಡುತ್ತಾ ಬಳಲಿದ ಕೃಷ್ಣನು ಸ್ವಲ್ಪ ವಿಶ್ರಾಂತಿಗಾಗಿ ಕುಳಿತರೂ, ನರಕಾ ಸುರನು ಯುದ್ಧ ಧರ್ಮ ಬಿಟ್ಟು ಆಯುಧ ಪ್ರಯೋಗ ಮಾಡುವುದನ್ನು ನೋಡಿ, ಸತ್ಯಭಾಮೆ ಒಡಿದೆದ್ದು ನರಕಾಸುರನ ಮೇಲೆ ಬಾಣಪ್ರಯೋಗ ಮಾಡಿದಳು.

ಅವಳು ಆಕರ್ಣಾಂತ ಎಳೆದು ಬಿಟ್ಟ ಬಾಣವು ನರಕಾಸುರನ ಎದೆಯೊಳಗೆ ಬಲವಾಗಿ ನಾಟಿತು. "ಅಮ್ಮಾ!" ಎಂದು ಕೂಗುತ್ತ, ನರಕಾಸುರನು ನೆಲಕ್ಕೊರಗಿ ಹೊರಳಾಡಿ ಎದ್ದು, ಕೊನೆಯ ಸಾಹಸ ದಿಂದ ಗದೆಯನ್ನೆತ್ತಿ ಕೃಷ್ಣನ ಮೇಲೆ ಹಾರಿದನು. ಆಗ ಕೃಷ್ಣನ ಚಕ್ರಾಯುಧವು ನರಕನ ತಲೆಯನ್ನು ತರಿದು ಹಾಕಿತು. ಆ ತಲೆ ಮೇಲೆ ಹಾರಿ ಕೃಷ್ಣ ನನ್ನು ವಿಷ್ಣುವೆಂದು ಸ್ತುತಿಸುತ್ತಾ, ಲೋಕದವರು ತನ್ನನ್ನು ಯಾವಾಗಲೂ ಜ್ಞಾಪಿಸಿಕೊಂಡಿರಬೇಕೆಂದು ವರವನ್ನು ಕೇಳಿ ಕಣ್ಣು ಮುಚ್ಚಿತು.

ಅದರಂತೆ ಕೃಷ್ಣನು ವರವನ್ನು ಕೊಟ್ಟನು. ಅಂದಿ ನಿಂದ ನರಕಾಸುರ ಸಂಹಾರವು ನಡೆದ ದಿನ ನರಕ ಚತುರ್ದಶಿಯಾಗಿ, ಮರುದಿನ ನರಕ ಪರಿಪಾಲನೆ ಅಂತ್ಯವಾಗಿ ಸಂತೋಷ ಸಂಭ್ರಮಗಳ ದೀಪಾವಳಿ ಹಬ್ಬಗಳು ಆಚರಣೆಗೆ ಬಂದುವು.

ಕೃಷ್ಣನು ನರಕಾಸುರನ ಕುಮಾರನಾದ ಭಗದತ್ತ ನಿಗೆ ಪಟ್ಟಕಟ್ಟಿ, ಅದಿತಿಯ ಕರ್ಣಕುಂಡಲಗಳೊಂದಿಗೆ ದ್ವಾರಕೆಯನ್ನು ಸೇರಿದನು. ಒಂದು ದಿನ ಕೃಷ್ಣನು



ರುಕ್ಮಿಣೀದೇವಿಯ ಮಂದಿರದಲ್ಲಿರುವಾಗ, ನಾರದನು ಬಂದು, ಅಲಭ್ಯವಾದ ಪಾರಿಜಾತ ಪುಷ್ಪವನ್ನು ಕೃಷ್ಣನಿಗೆ ಕೊಟ್ಟನು. ಕೃಷ್ಣನು ಅದನ್ನು ತನ್ನ ಪಕ್ಕದಲ್ಲಿದ್ದ ರುಕ್ಮಿಣಿಗೆ ಅಲಂಕಾರ ಮಾಡಿದನು.

ಈ ಸಮಾಚಾರ ಸತ್ಯಭಾಮೆಗೆ ತಿಳಿದು ಅವಳು ಕೃಷ್ಣನ ಮೇಲೆ ರುಷ್ಟಳಾದಳು. ಆಗ ಕೃಷ್ಣನು ಪಾರಿಜಾತ ವೃಕ್ಷವನ್ನೇ ತಂದು ನೆಡುವೆನೆಂದು ಹೇಳಿ ಅವಳನ್ನು ಸಮಾಧಾನಪಡಿಸಿದನು.

ಅದಿತಿಗೆ ಕರ್ಣಕುಂಡಲಗಳನ್ನು ಕೊಡುವ ನೆವನ ದಲ್ಲಿ ಕೃಷ್ಣನು ಸತ್ಯಭಾಮೆಯೊಂದಿಗೆ ಗರುಡನ ಮೇಲೇರಿಕೊಂಡು ದೇವಲೋಕಕ್ಕೆ ಹೋದನು. ಅದಿತಿಗೆ ಕುಂಡಲಗಳನ್ನು ಕೊಟ್ಟ ಮೇಲೆ ಕೃಷ್ಣನು ನಂದನವನದಲ್ಲಿ ವಿಹಾರ ಮಾಡುತ್ತ, ಪಾರಿಜಾತ ವೃಕ್ಷವನ್ನು ಕಿತ್ತು ಗರುಡನ ಮೇಲೆ ಹಾಕಿಕೊಂಡು ಹಿಂದಿರುಗತೊಡಗಿದನು.



ಸತ್ಯಭಾಮಾ ಕೃಷ್ಣರು ದೇವಪಾರಿಜಾತವನ್ನು ಅಪಹರಣ ಮಾಡಿಕೊಂಡು ಹೋಗುತ್ತಿದ್ದಾರೆಂದು ದೇವೇಂದ್ರನಿಗೆ ಗೊತ್ತಾಗಿ, ಯುದ್ಧಕ್ಕೆ ಬಂದನು. ಆಗ ಇಂದ್ರನು ಬೀಸಿದ ವಜ್ರಾಯುಧವು ಗರುತ್ಮಂತನ ರೆಕ್ಕೆಗೆ ತಾಗಲು, ರೆಕ್ಕೆಯ ಒಂದು ಗರಿಯನ್ನು ಅದಕ್ಕೆ ಬಿಟ್ಟುಕೊಟ್ಟನು ಗರುತ್ಮಂತ.

ಗರ್ವಗುಂದಿದ ಇಂದ್ರನು ಕ್ಷಮಿಸುವಂತೆ ಪ್ರಾರ್ಥಿಸಿ, ಕೃಷ್ಣನಿರುವಷ್ಟು ಕಾಲ ಪಾರಿಜಾತವೂ ಭೂಮಿಯಲ್ಲಿರುವುದೆಂದು ಹೇಳಿ ಹಿಂದಿರುಗಿದನು.

ಸತ್ಯಭಾಮೆಯ ಅಂತಃಪುರದ ಉದ್ಯಾನದಲ್ಲಿ ಪಾರಿಜಾತ ವೃಕ್ಷವು ಹೂಗಳಿಂದ ಗಮಗಮಿಸಿತು.

ಇಷ್ಟೆಲ್ಲಾ ಆದ ಮೇಲೆ ಕೃಷ್ಣನು ತನಗೆ ಪುತ್ರಪ್ರಾಪ್ತಿಯಾಗಬೇಕೆಂದು ಕೈಲಾಸಕ್ಕೆ ಹೋಗಿ ತಪಸ್ಸು ಮಾಡಿ, ಶಿವನ ಅನುಗ್ರಹವನ್ನು ಪಡೆದನು. ಆ ಸಮಯದಲ್ಲಿ ಸಾಲ್ವನೂ ಪೌಂಡ್ರಕನೂ ದ್ವಾರಕೆಗೆ ಕಾಟಕೊಡುತ್ತಿರಲು, ಕೃಷ್ಣನು ಬೇಗನೆ ಹಿಂದಿರುಗಿ ಬಂದು ಅವರಿಬ್ಬರನ್ನೂ ವಧಿಸಿದನು. ಹಾಗೆ ಸತ್ತವರಿಗೆ ದಂತವಕ್ರನು ಉತ್ತರ ಕ್ರಿಯೆಗಳನ್ನು ಮಾಡಿ ಬರುತ್ತಿರುವಾಗ, ತನಗಿದಿರಾಗಿ ಕೃಷ್ಣನು ಬರುವುದನ್ನು ನೋಡಿದನು. ಕೂಡಲೇ ಅವನು ಮಹಾ ರೋಷದಿಂದ ಗದೆಯನ್ನೆತ್ತಿಕೊಂಡು ಕೃಷ್ಣನ ಮೇಲೆ ಲಂಘಿಸಿದನು. ಕೃಷ್ಣನು ಅವನನ್ನು ಸಂಹರಿಸಿದ ಕೂಡಲೇ ಅವನಿಂದ ಹೊರಟ ಕಾಂತಿಯಲ್ಲಿ ವೈಕುಂಠ ದ್ವಾರಪಾಲಕ ವಿಜಯನ ರೂಪವು ತೋರಿ ಕೃಷ್ಣನಲ್ಲಿ ಐಕ್ಯವಾಯಿತು.

ಕೃಷ್ಣನಿಗೆ ಪ್ರದ್ಯುಮ್ನನೇ ಮೊದಲಾದ ಅನೇಕ ಮಂದಿ ಕುಮಾರರು ಹುಟ್ಟಿದರು. ಪ್ರದ್ಯುಮ್ನನ ಕುಮಾರನಾದ ಅನಿರುದ್ಧನನ್ನು ಬಾಣಾಸುರನ ಕುಮಾರಿ ಉಷಾ, ಕನಸಿನಲ್ಲಿ ನೋಡಿ ಮೋಹಿಸಿದಳು. ಅವಳ ಸಖಿಯಾದ ಚಿತ್ರಲೇಖೆ, ಶಾಂಬರೀ ಮಾಯಾ ವಿದ್ಯೆಯ ಪ್ರಭಾವದಿಂದ ಅನಿರುದ್ಧನನ್ನು ಉಷೆಯ ಅಂತಃಪುರಕ್ಕೆ ತರಿಸಿಬಿಟ್ಟಳು. ಉಷೆ ಅವನನ್ನು ಗಾಂಧರ್ವ ವಿಧಿಯಿಂದ ವರಿಸಿಕೊಂಡಳು.

ಬಾಣಾಸುರನು ಅನಿರುದ್ಧನನ್ನು ಹಿಡಿದು ನಾಗಪಾಶದಿಂದ ಬಂಧಿಸಿ ಸೆರೆಮನೆಯಲ್ಲಿಟ್ಟನು. ಮೊಮ್ಮಗನು ಹಾಗೆ ಬಂಧಿತನಾಗಿರುವುದನ್ನು ತಿಳಿದು ಕೃಷ್ಣನು ಯುದ್ಧಕ್ಕೆ ಬಂದನು. ಶಿವನು ಬಾಣನ ಪಕ್ಷದಲ್ಲಿ ಕೃಷ್ಣನೊಂದಿಗೆ ಯುದ್ಧಮಾಡಿ ಕಡೆಗೆ ಸೋತು ಹೋದನು.

ಆಮೇಲೆ ಕೃಷ್ಣನು ಬಾಣಾಸುರನನ್ನು ಸಂಧಿಸಿ ಯುದ್ಧ ಮಾಡುತ್ತ ಅವನಿಗೆ ಎರಡು ಕೈಗಳನ್ನು ಮಾತ್ರ ಉಳಿಸಿ ಉಳಿದ ಒಂಬೈನೂರ ತೊಂಬತ್ತೆಂಟು ಕೈಗಳನ್ನೂ ಕಡಿದು ಹಾಕಿದನು. ಬಾಣಾಸುರನು ಕೃಷ್ಣನಿಗೆ ಶರಣಾಗತನಾಗಿ ಸುಮುಖನಾಗಿ ಸಂಬಂಧಿಕನಾಗಿರಲು ಒಪ್ಪಿದನು. ಉಷಾ ಅನಿರುದ್ಧರ ಮದುವೆ ವೈಭವದಿಂದ ನಡೆಯಿತು. ಇದರಿಂದ ದಕ್ಷಿಣ ಭಾಗದ ಅಸುರರೊಂದಿಗೂ, ಉತ್ತರ ದಿಕ್ಕಿನ ರಾಜರು

ಗಳೊಂದಿಗೂ ಕೃಷ್ಣನಿಗೆ ಬಾಂಧವ್ಯವೇರ್ಪಟ್ಟು ಒಳ್ಳೆಯ ಐಕ್ಯತೆ ಉಂಟಾಯಿತು.

ಕೃಷ್ಣನು ಧರ್ಮಾನುವರ್ತಿಗಳಾದ ಪಾಂಡವರಿಗೆ ಹಿತನಾಗಿಯೇ ಪ್ರವರ್ತಿಸುತ್ತಿದ್ದನು. ಬಲರಾಮನ ಸಮ್ಮತಿಯನ್ನು ಕೇಳದೆಯೇ ತಂಗಿಯಾದ ಸುಭದ್ರೆಯನ್ನು ಕೃಷ್ಣನು ಅರ್ಜುನನಿಗೆ ಕೊಡಿಸಿ ಮದುವೆ ಮಾಡಿಸಿದನು.

ಬಾವ ಮೈದುನಂದಿರಾದ ಕೃಷ್ಣಾರ್ಜುನರು ಖಾಂಡವವನವನ್ನು ದಹಿಸುವಾಗ, ಆ ವನದೊಳಗೆ ಸಿಕ್ಕಿಕೊಂಡ ರಾಕ್ಷಸ ಶಿಲ್ಪಿಯಾದ ಮಯನನ್ನು ಕಾಪಾಡಿದರು. ಅದಕ್ಕಾಗಿ ಮಯನು ಪಾಂಡವರಿಗೆ ದೊಡ್ಡದೊಂದು ಸಭಾಭವನವನ್ನು ನಿರ್ಮಿಸಿಕೊಡುವೆನೆಂದು ಹೇಳಿದನು. ಅಗ್ನಿದೇವನು ಸಂತೃಪ್ತನಾಗಿ ಕೃಷ್ಣನಿಗೆ ಸುದರ್ಶನ ಚಕ್ರವನ್ನೂ, ಪಾಂಚಜನ್ಯವೆಂಬ ಶಂಖವನ್ನೂ ಕೊಟ್ಟು, ಅರ್ಜುನನಿಗೆ ಗಾಂಡೀವವೆಂಬ ಧನುಸ್ಸನ್ನೂ, ಅಕ್ಷಯ ತೂಣೀರವನ್ನೂ, ದೇವದತ್ತವೆಂಬ ಶಂಖವನ್ನೂ ಕೊಟ್ಟನು. ಇವುಗಳಿಂದ ಕೃಷ್ಣಾರ್ಜುನರ ಬಲವು ಬಹಳ ವೃದ್ಧಿಯಾಯಿತು.

ಧರ್ಮರಾಜನು ರಾಜಸೂಯಯಾಗವನ್ನು ಪ್ರಾರಂಭಿಸಿದನು. ' ಜರಾಸಂಧನನ್ನು ಅಂತ್ಯಗೊಳಿಸಬೇಕಾದ ಕಾಲವು ಈಗ ಪ್ರಾಪ್ತವಾಯಿತು.

ಕೃಷ್ಣನು ಭೀಮಾರ್ಜುನರೊಂದಿಗೆ ಮಾರುವೇಷಗಳಲ್ಲಿ ಹೋಗಿ ಗಿರಿವ್ರಜಪುರವನ್ನು ಪ್ರವೇಶಿಸಿ, ಅತಿಥಿಗಳೆಂದು ಹೇಳಿಕೊಂಡು, ಜರಾಸಂಧನ ಮಂದಿರವನ್ನು ಪ್ರವೇಶ ಮಾಡಿದರು.

ಬಕಾಸುರ, ದುರ್ಯೋಧನ, ಕೀಚಕ, ಭೀಮ, ಜರಾಸಂಧ ಇವರಿಷ್ಟು ಮಂದಿ ಆಗ ಸಮಬಲರಾಗಿದ್ದವರು, ಇವರಲ್ಲಿ ಒಬ್ಬನ ಕೈಯಿಂದಲೇ ಉಳಿದ ನಾಲ್ವರೂ ಸಂಹರಿಸಲ್ಪಡುವರೆಂಬ ರಹಸ್ಯವು ಕೃಷ್ಣನೊಬ್ಬನಿಗಷ್ಟೇ ಗೊತ್ತಿತ್ತು. ಭೀಮನು ಬಕಾಸುರನನ್ನು ಈ ಮೊದಲೇ ಕೊಂದುಹಾಕಿದ್ದನು. ಈಗ



ಜರಾಸಂಧನನ್ನು ಕೊಲ್ಲಬೇಕಾದವನು ಭೀಮನೇ. ಜರಾಸಂಧನು ಅಸ್ತ್ರಶಸ್ತ್ರಗಳಿಂದ ಸಾಯುವವನಲ್ಲ. ಅವನ ಶರೀರವನ್ನು ಇಬ್ಭಾಗವಾಗಿ ಸೀಳಿಯೇ ಕೊಲ್ಲಬೇಕಿತ್ತು.

ಅತಿಥಿಗಳಾದ ತಮಗೆ ಭೋಜನಕ್ಕೆ ಬದಲಾಗಿ, ತಮ್ಮೊಳಗೆ ಒಬ್ಬನೊಂದಿಗೆ ಮಲ್ಲಯುದ್ಧವನ್ನು ಕೊಡಬೇಕೆಂದು ಕೃಷ್ಣನು ಜರಾಸಂಧನೊಂದಿಗೆ ಹೇಳಿದನು. ಆಗ ಅತಿಥಿಗಳು ಯಾರೆಂಬುದು ಜರಾಸಂಧನಿಗೆ ಗೊತ್ತಾಯಿತು.

"ಕೃಷ್ಣಾ, ನೀನು ನನಗೆ ಹೆದರಿ ಪ್ರವರ್ಷಣ ಗಿರಿಗೆ ಓಡಿಹೋದವನು. ಅರ್ಜುನನೊಬ್ಬ ಇನ್ನೂ ಬೆಳೆಯದ ಎಳಸೇ. ಭೀಮನು ಪರವಾಗಿಲ್ಲ, ನನಗೆ ತಕ್ಕ ಜೋಡಿ !" ಎಂದನು ಜರಾಸಂಧ.

ಭೀಮ ಜರಾಸಂಧರೊಳಗೆ ಮುಷ್ಟಿಯುದ್ಧವು ಪ್ರಾರಂಭವಾಗಿ ಮಹಾ ಮಲ್ಲಯುದ್ಧವಾಯಿತು. ಘೋರವಾದ ಈ ಮಲ್ಲಯುದ್ಧದಲ್ಲಿ ಭೀಮನು



ಜರಾಸಂಧನನ್ನು ಸೋಲಿಸಿ, ಕಡೆಗೆ ಕೃಷ್ಣನ ಸಂಜ್ಞೆಯಂತೆ ಜರಾಸಂಧನನ್ನು ಎರಡು ಸಮಭಾಗವಾಗಿ ಸೀಳಿ, ಅವು ತಿರುಗಿ ಅಂಟಿಕೊಳ್ಳದ ಹಾಗೆ ಅಪಸವ್ಯವಾಗಿ ಬೇರ್ಪಡಿಸಿ ಹಾಕಿದನು. ಹೀಗೆ ಕೃಷ್ಣನು ಭೀಮನಿಂದ ಜರಾಸಂಧನನ್ನು ಕೊಲ್ಲಿಸಿದನು.

ಧರ್ಮರಾಜನ ರಾಜಸೂಯದಲ್ಲಿ ಭೀಷ್ಮನು ಹೇಳಿದಂತೆ ಕೃಷ್ಣನಿಗೆ ಅಗ್ರಪೂಜಾ ತಾಂಬೂಲ ಕೊಡಲ್ಪಟ್ಟಿತು.

ಸಭಾಮಧ್ಯದಲ್ಲಿದ್ದ ಶಿಶುಪಾಲನು ಅದನ್ನು ಸಹಿಸದೆ ಆಕ್ಷೇಪಿಸತೊಡಗಿದನು. ಕೃಷ್ಣನನ್ನು ಮದುಮಗಳನ್ನು ಕದ್ದ ಕಳ್ಳನೆಂದು, ಕುಲಹೀನನೆಂದು, ಬೈಗುಳ ಶತಕವನ್ನೇ ಸುರಿಸಿದನು. ಕತ್ತಿ ಹಿರಿದು ಕೃಷ್ಣನನ್ನೂ ಪಾಂಡವರನ್ನೂ ತಾನೇ ಕೊಲ್ಲುವೆನೆಂದನು.

ಅವನ ನೂರು ದೂಷಣೆಗಳಾಗಿ ನೂರ ಒಂದನೆಯದು ಹೊರಟುದೇ ತಡ, ಕೃಷ್ಣನು ಚಕ್ರದಿಂದ ಶಿಶುಪಾಲನ ತಲೆಯನ್ನು ಖಂಡಿಸಿದನು. ಶಿಶುಪಾಲನಿಂದ ವೈಕುಂಠದ ದ್ವಾರಪಾಲಕ ಜಯನು ಜ್ಯೋತೀರೂಪದಲ್ಲಿ ತೇಲಿಬಂದು ಕೃಷ್ಣನೊಳಗೆ ಐಕ್ಯನಾದನು. ಇಲ್ಲಿಗೆ ಜಯ ವಿಜಯರ ಮೂರನೇ ಜನ್ಮವು ಸಮಾಪ್ತಿಯಾಗಿ, ಅವರ ಶಾಪ ತೊಲಗಿ ಎಂದಿನಂತೆ ವಿಷ್ಣುವಿನ ದ್ವಾರಪಾಲಕರಾಗಿ ಇರತೊಡಗಿದರು.

ಪಾಂಡವರಿಗೆ ಮಯನು ನಿರ್ಮಿಸಿಕೊಟ್ಟ ಮಯ ಸಭೆಯನ್ನು ನೋಡಿ, ದುರ್ಯೋಧನನು ಭ್ರಮೆಗೊಳಗಾಗಿ ಅನೇಕ ಭಂಗಗಳಿಗೆ ಗುರಿಯಾದನು. ರತ್ನಕಂಬಳಿಯನ್ನು ನೀರೆಂದುಕೊಂಡು ಬಟ್ಟೆ ಎತ್ತಿ ಕಾಲಿಟ್ಟು ಭಂಗಿತನಾಗಿ, ನೀರನ್ನು ರತ್ನಕಂಬಳಿ ಎಂದುಕೊಂಡು ನೀರಿನಲ್ಲಿ ಜಾರಿಬಿದ್ದನು. ಅದನ್ನು ನೋಡಿ ದ್ರೌಪದಿಗೆ ನಗುಬಂದಿತು. ದುರ್ಯೋಧನನು ಅವಮಾನದಿಂದ ಕುದಿಯುತ್ತಿರಲು, ಶಕುನಿ ಸಮಾಧಾನಪಡಿಸುತ್ತ, ಪಾಂಡವರನ್ನೂ ದ್ರೌಪದಿಯನ್ನೂ ದುರ್ಯೋಧನನ ಸೇವಕರಾಗಿ ಮಾಡುವೆನೆಂದು ಭರವಸೆ ನೀಡಿದನು. ಅವನ ಆಲೋಚನೆಯಂತೆ ಧರ್ಮರಾಜನನ್ನು ಜೂಜಾಟಕ್ಕೆ ಕರೆಯಿಸಿದನು ದುರ್ಯೋಧನ. ಹೀಗೆ ಭಾರತ ಕಥೆ ಮುಂದುವರಿಯತೊಡಗಿ ಕೃಷ್ಣನ ಅನೇಕ ಸಹಾಯಗಳು ಪಾಂಡವರಿಗೆ ಬೇಕಾಗಿ ಬರುವಂತಾಯಿತು.

ಕೃಷ್ಣನ ಶಕ್ತಿಸಾಮರ್ಥ್ಯಗಳ ತೂಕದಷ್ಟೇ ಅವನ ಔದಾರ್ಯದ ತೂಕವೂ ಕುಚೇಲನಿಂದ ಜಗತ್ತಿಗೆ ತಿಳಿಯುವಂತಾಯಿತು. ಕುಚೇಲನು ಕೃಷ್ಣನ ಬಾಲ್ಯಸ್ನೇಹಿತನಾಗಿದ್ದವನು. ಬಾಲ್ಯದಲ್ಲಿ ಕೃಷ್ಣ ಬಲರಾಮರು ಸಾಂದೀಪನ ಆಶ್ರಮದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಕುಚೇಲನು ಅಲ್ಲಿ ಸಹ ವಿದ್ಯಾರ್ಥಿಯಾಗಿದ್ದನು.

ಮುಂದೆ ಕುಚೇಲನು ಅಧಿಕ ಸಂತಾನದಿಂದ ಬಡತನದಲ್ಲಿ ಸೊರಗಿ ಬತ್ತಿಹೋದನು. ಕಡೆಗೆ ಆ ಬಡಬ್ರಾಹ್ಮಣನು ಹೆಂಡತಿಯ ಆಲೋಚನೆಯಂತೆ,

ಬಡತನ ನೀಗಿಸಿಕೊಳ್ಳಲು ಕೃಷ್ಣನ ಸಹಾಯ ಕೇಳಬೇಕೆಂದು ಹೊರಟನು. ಆಗ ಅವನ ಹೆಂಡತಿ ಸ್ವಲ್ಪ ಅವಲಕ್ಕಿಯನ್ನು ರುಚಿಯಾಗುವಂತೆ ಮಾಡಿ ಚಿಕ್ಕ ಗಂಟು ಕಟ್ಟಿಕೊಟ್ಟಿದ್ದಳು.

ದ್ವಾರಕೆಯ ಸೌಧಾಗ್ರದ ಮೇಲೆ ಅಷ್ಟಪತ್ನಿಯರಿಂದ ಸೇವಿಸಿಕೊಂಡು ಉಯ್ಯಾಲೆಯಾಡುತ್ತಿದ್ದ ಕೃಷ್ಣನು ದೂರದಲ್ಲಿ ಬರುವ ಕುಚೇಲನನ್ನು ನೋಡಿ, ತಟ್ಟನೆದ್ದು ಪಾದಚಾರಿಯಾಗಿ ಇದಿರಾಗಿ ಹೋಗಿ ಮಿತ್ರನನ್ನು ಗಾಢಾಲಿಂಗನ ಮಾಡಿಕೊಂಡನು. ಕೈ ಹಿಡಿದು ಕರೆದುಕೊಂಡು ಬಂದು ತನ್ನ ಸಿಂಹಾಸನದ ಮೇಲೆ ಕೂಡಿಸಿಕೊಂಡನು.

ಕೃಷ್ಣನ ಎಂಟು ಮಂದಿ ಹೆಂಡತಿಯರೂ ಕುಚೇಲನಿಗೆ ಸಮಸ್ತ ಮರ್ಯಾದೆಗಳನ್ನೂ ಮಾಡಿದರು. ಅವರ ಉಪಚಾರಗಳಿಂದ, ಕೃಷ್ಣನ ಆತ್ಮಾದರಣೆಯಿಂದ ಆನಂದ ಪಾರವಶ್ಯತೆಯಲ್ಲಿ ತೇಲಿದ ಕುಚೇಲನಿಗೆ ಬಂದ ಕಾರ್ಯದ ನೆನಪೇ ಬಾರದೆಹೋಯಿತು. ಕೃಷ್ಣನು ಗುರುಕುಲದಲ್ಲಿ ನಡೆದ ಬಾಲ್ಯದ ನೆನಪುಗಳನ್ನು ಹೇಳಿಕೊಂಡು ಮಾತಾಡುತ್ತಿರಲು, ಅವನಿಗಾಗಿ ತಂದಿದ್ದ ಅವಲಕ್ಕಿಯನ್ನು ಕುಚೇಲನು ಮರೆತನು. ಆ ಚಿಕ್ಕ ಮೂಟೆಯನ್ನು ಕೃಷ್ಣನೇ ಅವನ ಕೈಯಿಂದ ಕಿತ್ತು, ಬಿಚ್ಚಿ, ಒಂದು ಮುಷ್ಟಿ ಅವಲಕ್ಕಿಯನ್ನು ತಾನು ಬಾಯಿಗೆ ಹಾಕಿಕೊಂಡು ಆಪ್ಯಾಯತೆಯಿಂದ ಸವಿದನು. ಉಳಿದುದನ್ನು ಅವನ ಅಷ್ಟಪತ್ನಿಯರೂ ಹಂಚಿಕೊಂಡು ತಿಂದರು.

ಕಡೆಗೂ ಕುಚೇಲನು ಆನಂದ ತುಂದಿಲಾವಸ್ಥೆಯಲ್ಲಿಯೇ ತಾನು ಬಂದ ಕಾರ್ಯವನ್ನು ಕೃಷ್ಣನೊಂದಿಗೆ ಹೇಳದೆ, ಸಹಾಯವೇನನ್ನೂ ಕೇಳದೆ, ಮನಸ್ಸಿನಲ್ಲಿ ಅಡಿಗಡಿಗೂ ಕೃಷ್ಣನ ಗುಣಗಳನ್ನೇ ನೆನೆಸಿಕೊಳ್ಳುತ್ತಾ, ಹಿಂದಿರುಗಿ ಪ್ರಯಾಣ ಮಾಡಿ, ತನ್ನ ಮನೆಗೆ ಬಂದನು. ಆದರೆ ಮನೆಯ ಗುರುತೇ ಅವನಿಗೆ ಸಿಗಲಿಲ್ಲ.

ಅವನ ಚಿಕ್ಕ ಮನೆಯಿರುವಲ್ಲಿ ದೊಡ್ಡ ಭವನವಿದ್ದಿತು. ಆ ಭವನದ ಗೋಡೆಗಳು ಬೆಳ್ಳಿ, ಬಂಗಾರಗಳ ಕಾಂತಿಯಿಂದ ಹೊಳೆಯುತ್ತಿದ್ದಿತು. ರತ್ನಗಳು ಹುದುಗಿಸಲ್ಪಟ್ಟ ಕಂಬಗಳು. ಅವನ ಹೆಂಡತಿ ಅನರ್ಘವಾದ ಸೀರೆಯಿಂದ ಆಭರಣಗಳಿಂದ ರಾರಾಜಿಸುತ್ತಿದ್ದಳು. ಮಕ್ಕಳೆಲ್ಲಾ ಪಟ್ಟೆ ಬಟ್ಟೆಗಳನ್ನು ಧರಿಸಿ ವಸಂತದಲ್ಲಿ ಅರಳಿದ ಹೂಗಳಂತೆ ಆನಂದದಿಂದ ಆಡಿಕೊಂಡಿದ್ದರು. ಅಷ್ಟೈಶ್ವರ್ಯಗಳೂ ಅವನ ಮನೆಯಲ್ಲಿ ತುಂಬಿ ಸೂಸುತ್ತಿದ್ದುವು.

ಕುಚೇಲನೂ ಅವನ ಹೆಂಡತಿ ಮಕ್ಕಳೂ ಕೃಷ್ಣನ ಕೃಪಾ ವಿಶೇಷವನ್ನು ಕೊಂಡಾಡುತ್ತ, ಭಕ್ತಿ ತತ್ಪರರಾಗಿ, ದಾನಧರ್ಮಗಳಿಂದ, ಇತರರನ್ನೂ ಸುಖಿಪಡಿಸಿ, ತಾವೂ ಸುಖವಾಗಿದ್ದರು.






**ಪ**ರ್ಷಿಯಾ ದೇಶದೊಳಗೆ ಷಿರಾಜ್ ಎಂಬ ನಗರವು ಮುಖ್ಯವಾದ ಯಾತ್ರಾಸ್ಥಳವಾಗಿಯೂ, ದೊಡ್ಡ ವ್ಯಾಪಾರ ಕೇಂದ್ರವಾಗಿಯೂ ಇದ್ದಿತು. ಅಲ್ಲಿಗೆ ಯಾವಾಗಲೂ ಬೇರೆಬೇರೆ ಪ್ರಾಂತದ ಜನರು ಬರುತ್ತಾ ಹೋಗುತ್ತಾ ಇರುತ್ತಾರೆ. ಆ ನಗರಕ್ಕೆ ಬರುವವರು ಒಂದು ಅರಣ್ಯಮಾರ್ಗದಿಂದಾಗಿಯೇ ಬರಬೇಕಾಗಿತ್ತು.

ಹಾಗೆ ಬರುವವರಿಗೆ ಕಾಡಿನಲ್ಲಿ ಒಂದು ವಿಚಿತ್ರವಾದ ಪಕ್ಷಿ ಯಾವಾಗಲೂ ಕಾಣಿಸುತ್ತಿತ್ತು, ಅಷ್ಟೊಂದು ಸುಂದರವಾದ ಪಕ್ಷಿಯನ್ನು ತಾವು ಬೇರೆಲ್ಲಿಯೂ ನೋಡಿಲ್ಲವೆಂದು ಎಲ್ಲರೂ ಅತಿಶಯವಾಗಿ ಹೇಳುತ್ತಿದ್ದರು. ಅದು ಸ್ವರ ತೆಗೆದು ಹಾಡುತ್ತಿದ್ದರೆ ಗಂಧರ್ವಗಾನ ಕೂಡಾ ನಾಚಿಕೊಳ್ಳುತ್ತಿದ್ದಿತಂತೆ! ಅದರ ಇಂಪು ಮರೆಯುವಂಥಾದ್ದಲ್ಲವಂತೆ.

ಆ ವಿಚಿತ್ರವಾದ ಪಕ್ಷಿಯನ್ನು ಹಿಡಿದುಕೊಳ್ಳಲು ಅನೇಕ ಮಂದಿ ಬಹಳ ಪ್ರಯತ್ನ ಮಾಡಿದ್ದಾರೆ. ಅಂಥವರಲ್ಲಿ ಧನಿಕ ಕುಟುಂಬದ ಯುವಕರಷ್ಟೇ ಅಲ್ಲದೆ, ನೆರೆಹೊರೆ ರಾಜ್ಯಗಳ ರಾಜಕುಮಾರರು ಕೂಡಾ ಪ್ರಯತ್ನಿಸಿದ್ದರು.

ಅದರಲ್ಲಿ ಒಂದು ಆಶ್ಚರ್ಯವೇನೆಂದರೆ, ಹಾಗೆ ಹೋದವರಲ್ಲಿ ಒಬ್ಬರು ಕೂಡಾ ಹಿಂದಿರುಗಿ ಬಾರದೆ, ನಿಂತಲ್ಲೇ ಕಲ್ಲಾಗಿ ಹೋಗಿದ್ದರು !

ಅಂತಹ ವಿಚಿತ್ರ ಪಕ್ಷಿಯನ್ನು ಕುರಿತು ಕೇಳಿದ ಷಿರಾಜ್ ರಾಜಕುಮಾರಿಗೆ ಅದನ್ನು ತನ್ನದಾಗಿ ಮಾಡಿಕೊಳ್ಳಬೇಕೆಂಬ ಆಶೆಯುಂಟಾಯಿತು. ಅವಳು ತಂದೆಯ ಅನುಮತಿ ಪಡೆದು ಒಂದು ಡಂಗುರ ಹೊಡೆಯಿಸುವಂತೆ ಮಾಡಿದಳು. ಆ ವಿಚಿತ್ರ ಪಕ್ಷಿಯನ್ನು ಹಿಡಿದುತಂದವನನ್ನು ತಾನು ಮದುವೆಯಾಗುವೆನೆಂದು ಅವಳು ಸಾರಿಸಿದ ಡಂಗುರವಾಗಿತ್ತು.

ನಗರದಲ್ಲಿ ಧನಿಕ ಕುಟುಂಬಕ್ಕೆ ಸೇರಿದ ಮೂವರು ಯುವಕರಿದ್ದರು. ಅವರು ಚಿಕ್ಕಂದಿನಿಂದಲೂ ಒಟ್ಟಾಗಿ ಆಡಿ ಪಾಡಿ ಬೆಳೆದು ಅಚ್ಚು ಮೆಚ್ಚಿನ ಮಿತ್ರರಾಗಿದ್ದರು. ಅವರಲ್ಲಿ ಒಬ್ಬನು ಹೇಗಾದರೂ ಉಪಾಯ ಮಾಡಿ ವಿಚಿತ್ರಪಕ್ಷಿಯನ್ನು ಹಿಡಿದು ತಂದು ರಾಜಕುಮಾರಿಯನ್ನು ಮದುವೆಯಾಗುವ ಉದ್ದೇಶದಿಂದ ಅರಣ್ಯದ ಕಡೆಗೆ ಹೋದನು. ಅರಣ್ಯದಲ್ಲಿ ಆ ಪಕ್ಷಿ ಯಾವ ಪ್ರಾಂತದಲ್ಲಿ ತಿರುಗುತ್ತಿದೆ ಎಂಬುದನ್ನು

ಅರೇಬಿಯಾ ಕಥೆ



ಪ್ರಯಾಣಿಕರ ಹತ್ತಿರ ವಿಚಾರಿಸಿ ತಿಳಿದು ಹಾಗೆಯೇ ಹೋಗಿ, ಒಂದು ದಿನ ನಡು ಮಧ್ಯಾಹ್ನದ ಹೊತ್ತಿನಲ್ಲಿ, ಒಂದು ಮರದ ಕೊಂಬೆಯಲ್ಲಿರುವ ಆ ಪಕ್ಷಿಯನ್ನು ನೋಡಿದನು.

ಅವನು ಅದನ್ನು ಹಿಡಿಯಲು ಮರವನ್ನು ಸಮೀಪಿಸುತ್ತಿರಲು, ಪಕ್ಷಿ ಕೊರಳೆತ್ತಿ ತಾಳಕ್ಕೆ ಸರಿಯಾಗಿ ಬಾಲ ಕುಣಿಸುತ್ತ ಸುಶ್ರಾವ್ಯವಾಗಿ ಹಾಡತೊಡಗಿತು. ಆ ಹಾಡು ಕೇಳುತ್ತಾ ಹಾಗೆಯೇ ತನ್ಮಯನಾಗಿ ಮೈಮರೆತನು. ಅವನಿಗೆ ತಿಳಿಯದಂತೆಯೇ ತಾನು ಕೂಡಾ ಅದರ ಸ್ವರದೊಂದಿಗೆ ಹಾಡತೊಡಗಿದನು. ಅದರ ಇಂಪಾದ ಸ್ವರದೊಂದಿಗೆ ಅವನ ಸ್ವರವು ಕೂಡಿಕೊಳ್ಳಲಾಗದೆ, ಇದ್ದಕ್ಕಿದ್ದ ಹಾಗೆ ಅವನೇ ಕಲ್ಲಾಗಿ ಹೋದನು !

ಒಂದು ತಿಂಗಳು ಕಳೆಯಿತು. ಮೂವರು ಮಿತ್ರರಲ್ಲಿ ಒಬ್ಬನು ಬಾರದಿರುವುದನ್ನು ನೋಡಿ, ಎರಡನೇ ಮಿತ್ರನು ಆ ಪಕ್ಷಿಯನ್ನು ಹಿಡಿದು ತರಲು ಹೊರಟನು. ಅವನಿಗೂ ರಾಜಕುಮಾರಿಯನ್ನು ಮದುವೆಯಾಗುವ ಕೋರಿಕೆ ಬಲವಾಗಿಯೇ ಇದ್ದಿತು. ಆದರೆ ಹೋದವನು ಎರಡು ತಿಂಗಳಾದರೂ ತಿರುಗಿ ಬರಲಿಲ್ಲ.

ಮಿತ್ರರೊಳಗೆ ಮೂರನೆಯವನಾದ ಹಾನೀಫ್ ತಾನು ಆ ಪಕ್ಷಿಯನ್ನು ತರಲು ಹೊರಟನು. ಹೋಗಬೇಡವೆಂದು ಹಿತ ಚಿಂತಕರು ತಡೆದರೂ, ಅವನು ಕೇಳಲಿಲ್ಲ. "ನನಗೆ ಆ ವಿಚಿತ್ರ ಪಕ್ಷಿಯನ್ನು ಹಿಡಿದು ತಂದು ರಾಜಕುಮಾರಿಯನ್ನು ಮದುವೆಯಾಗಬೇಕೆಂದೇನಿಲ್ಲ. ನನ್ನ ಇಬ್ಬರು ಸ್ನೇಹಿತರ ಗತಿ ಏನಾಯಿತೆಂದು ತಿಳಿಯಲಿಕ್ಕೇ ಹೋಗುತ್ತೇನೆ. ಸಾಧ್ಯವಾದರೆ ಅವರನ್ನು ರಕ್ಷಿಸಿ ಕರೆದುಕೊಂಡೂ ಬರುತ್ತೇನೆ" ಎಂದು ಹೊರಟನು ಹಾನೀಫ್.

ಅರಣ್ಯವನ್ನು ತಲಪಿದ ಮೇಲೆ ಒಂದು ಕಡೆಯಲ್ಲಿ ಹಾನೀಫನಿಗೆ ಆ ವಿಚಿತ್ರ ಪಕ್ಷಿ ನೋಡಲು ಸಿಕ್ಕಿತು. ಅದು ಅವನನ್ನು ನೋಡಿದ ಕೂಡಲೇ ಸ್ವರ ತೆಗೆದು ಹಾಡತೊಡಗಿತು. ಹಾನೀಫ್ ಅದರ ಹಾಡು ಕೇಳುತ್ತ ಮುಗ್ಧನಾದನು. ಅವನಿಗೂ ಅದರ ಸ್ವರವನ್ನು ಅನುಕರಿಸಬೇಕೆಂದು ತೋರಿತು. ಅಷ್ಟು ಮಾಧುರ್ಯ ತನ್ನ ಸ್ವರಕ್ಕೆ ಇಲ್ಲವೆಂದೂ, ತಾನು ಸ್ವರ ಹೊರಡಿಸಿದರೆ ರಸಾಭಾಸವಾದೀತೆಂದೂ ತಿಳಿದು ಸಹನೆಯಿಂದ ತನ್ನ ಕೋರಿಕೆಯನ್ನು ನಿಗ್ರಹಿಸಿಕೊಂಡು, ಮೆಲ್ಲನೆ ಮರವೇರಿ ಅದರ ಸಮೀಪಕ್ಕೆ ಹೋದನು. ಅದೇನೂ ಹಾರಿ ಹೋಗದೆ ಹಾಡು ನಿಲ್ಲಿಸಿ, ಸುಲಭವಾಗಿ ಅವನ ಕೈಗೆ ಸಿಕ್ಕಿತು.

ಹಾನಿಫ್ ಆಪ್ಯಾಯತೆಯಿಂದ ಆ ವಿಚಿತ್ರ ಸುಂದರ ಪಕ್ಷಿಯ ತಲೆಯನ್ನು ನೀವುತ್ತಾ, "ಏನು ಸೌಂದರ್ಯವೋ ನಿನ್ನದು ! ನಿನ್ನಷ್ಟು ಸೌಂದರ್ಯ ಯಾವುದಕ್ಕೂ ಇರಲಾರದು. ನನ್ನ ಮಿತ್ರರಿಬ್ಬರಿಗೂ ಮತ್ತೆ ಪ್ರಾಣ ಬರುವ ಹಾಗೆ ಮಾಡಲಾರೆಯಾ ಮುದ್ದು ಪಕ್ಷಿ !" ಎಂದನು.



ಪಕ್ಷಿ ತಲೆಯಾಡಿಸುತ್ತ, "ಅವರು ನನಗೆ ಗೇಲಿ ಮಾಡಿ ಹಾಡಿ ಹಾಗಾದರು. ಅವರನ್ನು ಮತ್ತೆ ಎಬ್ಬಿಸುತ್ತೇನೆ. ಕಲ್ಲಾಗಿರುವ ಅವರ ಮೇಲು ಭಾಗದಲ್ಲಿ ನನ್ನನ್ನು ಹಾರಲು ಬಿಡು" ಎಂದು ಹೇಳಿತು.

ಹಾನೀಫ್ ಪಕ್ಷಿಯನ್ನು ಬಿಟ್ಟನು. ಅದು ಕಲ್ಲಿನ ರೂಪದಲ್ಲಿದ್ದ ಹಾನೀಫನ ಮಿತ್ರರ ಮೇಲೆ ಎರಡು ಸಾರಿ ಪ್ರದಕ್ಷಿಣೆಯಾಗಿ ಹಾರಿತು. ಕೂಡಲೇ ಕಲ್ಲು ಹೋಗಿ ಅವನ ಮಿತ್ರರಿಬ್ಬರೂ ಅಲ್ಲಿ ಪ್ರತ್ಯಕ್ಷರಾಗಿ ಬಂದರು.

ಮತ್ತೆ ಹಾನೀಫನ ಹೆಗಲ ಮೇಲೆ ಬಂದು ಕುಳಿತ ಪಕ್ಷಿಯನ್ನು ನೋಡಿ ಹಾನೀಫ್, "ಪ್ರಿಯ ಪಕ್ಷೀ, ನಿನ್ನ ಅಂದಚೆಂದ ನೋಡಿ ನಿನ್ನನ್ನು ಹಿಡಿಯಲು ಬಂದ ಇನ್ನೂ ಹಲವರು ಕಲ್ಲಾಗಿ ಮಾರ್ಪಟ್ಟಿದ್ದಾರಷ್ಟೆ? ದಯ ಮಾಡಿ ಅವರಿಗೂ ಮೊದಲಿನ ರೂಪ ಬರುವ ಹಾಗೆ ಮಾಡುವೆಯಾ?" ಎಂದನು.

ವಿಚಿತ್ರಪಕ್ಷಿ ಕಲ್ಲಿನ ರೂಪದಲ್ಲಿರುವ ಉಳಿದೆಲ್ಲರ ಮೇಲೆಯೂ ವಲಯಾಕಾರವಾಗಿ ಎರಡು ಸಾರಿ ಹಾರಿತು. ಮರುಕ್ಷಣದಲ್ಲಿ ಅವರೆಲ್ಲರಿಗೂ ಮಾನವ ರೂಪಗಳು ಬಂದು ಬಿಟ್ಟವು. ಅವರೆಲ್ಲಾ ಹಾನೀಫನಿಗೆ ತಮ್ಮ ಕೃತಜ್ಞತೆ ಹೇಳಿಕೊಂಡು ತಮ್ಮ ತಮ್ಮ ಪ್ರಾಂತಗಳಿಗೆ ಹೊರಟುಹೋದರು.

ಹಾನೀಫ್ ಪಕ್ಷಿಯೊಂದಿಗೆ "ನಿನ್ನ ಉಪಕಾರ ಎಂದಿಗೂ ಮರೆಯಲಾರೆ. ನೀನು ನನ್ನೊಂದಿಗೆ ನಗರಕ್ಕೆ ಬರಬಾರದೆ?" ಎಂದು ಕೇಳಿದನು.

"ಬಾರದೇ ಇರಲು ನನಗೇನಾಗಿದೆ? ಹೋಗೋಣ" ಎಂದು ಪಕ್ಷಿ ಮೃದುವಾಗಿ ಉತ್ತರಿಸಿತು.

ಹಾನೀಫ್ ತನ್ನೊಂದಿಗೆ ತಂದಿದ್ದ ಪಂಜರದ ಬಾಗಿಲನ್ನು ತೆರೆದನು. ಆಗ ಪಕ್ಷಿ ಅವನೊಂದಿಗೆ, "ನನ್ನ ಎಡದ ಕಾಲಿನಲ್ಲಿರುವ ಉಂಗುರವನ್ನು ನೋಡಿದೆಯಾ? ಅದನ್ನು ತೆಗೆದು ನಿನ್ನ ಬೆರಳಿಗೆ ಹಾಕಿಕೋ. ಅದು ಮುಂದೆ ನಿನಗೆ ಬಹಳ ಒಳಿತನ್ನು ಮಾಡುತ್ತದೆ" ಎಂದು ಹೇಳಿ, ಉಂಗುರವನ್ನು ಕೊಟ್ಟು ಪಂಜರದೊಳಗೆ ಹೋಯಿತು.

ಹಾನೀಫ್ ಅದರ ಕಾಲಿನ ಉಂಗುರವನ್ನು ತೆಗೆದುಕೊಂಡು ತನ್ನ ಬೆರಳಿಗೆ ಸೇರಿಸಿಕೊಂಡನು. ಆಮೇಲೆ ಪಂಜರವನ್ನು ತೆಗೆದುಕೊಂಡು ಇಬ್ಬರು ಮಿತ್ರರೊಂದಿಗೆ ನಗರಕ್ಕೆ ಹಿಂದಿರುಗಿದನು. ದಾರಿಯಲ್ಲಿ ಕತ್ತಲಾಯಿತು. ಮೂವರೂ ಆ ರಾತ್ರಿಯನ್ನು ಒಂದು ಮರದ ಕೆಳಗೆ ಮಲಗಿ ಕಳೆಯತೊಡಗಿದರು.

ಅರ್ಧರಾತ್ರಿ ಕಳೆಯುತ್ತಿರಲು, ಹಾನೀಫ್ ಗಾಢ ನಿದ್ರೆಯಲ್ಲಿದ್ದನು. ದುಷ್ಟರಾದ ಅವನ ಮಿತ್ರರಿಬ್ಬರೂ ತಮ್ಮೊಳಗೆ ಮಾತಾಡಿಕೊಂಡು, ಹಾನೀಫನ ಬಾಯಿಗೆ ಬಟ್ಟೆ ತುರುಕಿ, ಕೈಕಾಲುಗಳನ್ನು ಕಟ್ಟಿ, ಎತ್ತಿಕೊಂಡು ಹೋಗಿ ಸಮೀಪದಲ್ಲಿದ್ದ ಒಂದು ಪಾಳು ಬಾವಿಯೊಳಗೆ ಹಾಕಿಬಿಟ್ಟರು. ಅದೃಷ್ಟವಶಾತ್ ಬಾವಿಯಲ್ಲಿ ನೀರಿರಲಿಲ್ಲ. ಬದಲಿಗೆ ಮೆತ್ತಗಿನ ಹುಲ್ಲುಗಿಡಗಳೂ ಎಲೆಗಳ ರಾಶಿಯೂ ಒಂದಷ್ಟು ತುಂಬಿದ್ದುವು, ಹಾನೀಫ



ನಿಗೆ ಪೆಟ್ಟೇನೂ ಆಗದಿದ್ದರೂ ಬಿದ್ದ ಅದುರಿಕೆಯಿಂದ ಮೈ ನಡುಗಿ ಮೂರ್ಛೆಹೋದನು.

ಸ್ವಲ್ಪಹೊತ್ತಿನ ಮೇಲೆ ಹಾನೀಫನಿಗೆ ತನ್ನಂತೆ ಮೂರ್ಛೆ ತಿಳಿದು ಕಣ್ಣು ಬಿಡಿಸಿದನು. ಅವನ ಪಕ್ಕದಲ್ಲಿ ಕಪ್ಪಗಿನ ಒಂದು ಭೂತವು ಕುಳಿತುಕೊಂಡಿದ್ದಿತು. ಹಾನೀಫ್ ಒಂದೆರಡುಕ್ಷಣ ಹೆದರಿದರೂ, ಸುಮ್ಮನಿರುವ ಭೂತದ ವಿನಯ ಭಾವವನ್ನು ನೋಡಿ, "ಯಾರು ?" ಎಂದು ಪ್ರಶ್ನಿಸಿದನು.

"ನಾನು ನಿಮ್ಮ ಬೆರಳಿನಲ್ಲಿದ್ದ ಉಂಗುರದಲ್ಲಿರುವ ಭೂತ. ನೀವು ಇಲ್ಲಿಗೆ ಬೀಳುವಾಗ ಉಂಗುರವು ಕಲ್ಲಿಗೆ ತಾಗಿ ತಿಕ್ಕಿಕೊಂಡಿತು. ಆಗ ನಾನು ವಿಧಿಯಂತೆ ಪ್ರತ್ಯಕ್ಷನಾದೆನು. ನಿಮಗೆ ಬೇಕಾದುದನ್ನು ಮಾಡಿಕೊಟ್ಟು ಮಾಯವಾಗುವುದು ನನ್ನ ಕೆಲಸ. ಈಗ ನಿಮಗೆ ಏನಾಗಬೇಕೋ ಆಜ್ಞೆ ಮಾಡಿರಿ ಸ್ವಾಮಿ" ಎಂದು ಕೇಳಿಕೊಂಡಿತು ಆ ಭೂತ.

"ನನ್ನನ್ನು ಮೊದಲು ಈ ಹಾಳು ಬಾವಿಯಿಂದ ಮೇಲೆ ಕರೆದುಕೊಂಡು ಹೋಗು. ಆಮೇಲೆ ಏನು ಮಾಡಬೇಕೋ ಹೇಳುತ್ತೇನೆ" ಎಂದನು ಹಾನಿಫ್.

ಕರಿಭೂತವು ಅವನನ್ನು ಎತ್ತಿಕೊಂಡು ಬಾವಿಯಿಂದ ಮೇಲಕ್ಕೆ ಹಾರಿತು. ಅಲ್ಲಿ ಯಾರೂ ಇಲ್ಲದಿರುವುದನ್ನು ನೋಡಿ ಹಾನೀಫನು ಭೂತದೊಂದಿಗೆ, "ನಾನೀಗ ನಗರಕ್ಕೆ ಹೋಗಬೇಕು. ನೀನು ಕುದುರೆಯಾದರೆ ಒಳ್ಳೇದು" ಎಂದನು.

ಕರಿಭೂತವು ಕುದುರೆಯಾಗಿ ಮಾರ್ಪಟ್ಟು ಹಾನೀಫನನ್ನು ಏರಿಸಿಕೊಂಡು ಹೋಗಿ ನಗರಕ್ಕೆ ತಲಪಿಸಿ, ಮಾಯವಾಗಿ ಉಂಗುರದೊಳಗೆ ಐಕ್ಯವಾಯಿತು. ಆ ಸಮಯದಲ್ಲಿ ರಾಜಕುಮಾರಿಗೆ ವಿಚಿತ್ರ ಪಕ್ಷಿಯ ಬಹುಮಾನ ಕೊಡುವ ಉತ್ಸವದ ಏರ್ಪಾಟುಗಳು ಸಂಭ್ರಮದಿಂದ ನಡೆಯಲು ತೊಡಗಿತ್ತು. ರಾಜಧಾನಿಯೊಳಗೆ ಅಲಂಕಾರ ನಡೆಯುತ್ತ, ಜನರೆಲ್ಲ ಉತ್ಸಾಹದಿಂದಿರುವಾಗ, ರಾಜಭವನದ ಹತ್ತಿರ ಹಾನೀಫನ ಮಿತ್ರರಿಬ್ಬರೂ ತಮ್ಮೊಳಗೆ ಕಲಹ ಮಾಡಿಕೊಂಡಿದ್ದರು. ಅವರಲ್ಲಿ ಒಬ್ಬನು ರಾಜನೊಂದಿಗೆ ಆ ಪಕ್ಷಿಯನ್ನು ನಾನು ಹಿಡಿದೆನೆಂದರೆ, ಇನ್ನೊಬ್ಬನು ತಾನು ಹಿಡಿದೆನೆಂದು ಮುಂಬೀಳುತ್ತಿದ್ದನು. ರಾಜನಿಗೆ ಏನು ಮಾಡುವುದೆಂದು ಗೊತ್ತಾಗಲಿಲ್ಲ.

ಹಾನೀಫ್ ರಾಜನ ಹತ್ತಿರ ಹೋಗಿ, "ಮಹಾಪ್ರಭೂ, ಆ ಪಕ್ಷಿಯನ್ನೇ ಕೇಳಿಬಿಡಿರಿ, ನಿಜವು ಗೊತ್ತಾಗಿ ಬಿಡುತ್ತದೆ" ಎಂದನು.

ಅಲ್ಲಿ ಅಕಸ್ಮಾತ್ತಾಗಿ ಹಾನೀಫನನ್ನು ನೋಡಿದ ಕೂಡಲೇ, ಅವನ ದುಷ್ಟ ಮಿತ್ರರಿಬ್ಬರೂ ಜುಮ್ಮನೆ ಬೆವತು ನಡುಗತೊಡಗಿದರು.

"ಆ ಪಕ್ಷಿ ಮಾತೇ ಆಡುವುದಿಲ್ಲ. ಅದೇ ದೊಡ್ಡ ತೊಂದರೆಯಾಗಿದೆ" ಎಂದನು ರಾಜ ಬೇಸರದಿಂದ.

"ಆ ಪಕ್ಷಿಯನ್ನು ನನ್ನ ಬಳಿಗೆ ತರಿಸಿರಿ. ನಾನು ಮಾತಾಡಿಸುತ್ತೇನೆ" ಎಂದನು ಹಾನೀಫ್.

ರಾಜಕುಮಾರಿಯ ಮಂದಿರದೊಳಗಿನಿಂದ ಪಕ್ಷಿಯು ಪಂಜರವನ್ನು ಬರಮಾಡಿಸಲಾಯಿತು. ಹಾನೀಫ್ ಪಕ್ಷಿಯೊಂದಿಗೆ, "ಅರಣ್ಯದಲ್ಲಿ ನಿನ್ನನ್ನು ಯಾರು ಹಿಡಿದರೆಂಬುದನ್ನು ನಿಜ ಹೇಳು" ಎಂದನು.

"ನನಗೆ ಸ್ವೇಚ್ಛೆಯನ್ನು ಕೊಡಬೇಕು. ಪಂಜರದೊಳಗೆ ನಾನು ಯಾವ ಪ್ರಶ್ನೆಗೂ ಉತ್ತರ ಕೊಡಲಾರೆ" ಎಂದು ಹೇಳಿತು ಆ ಪಕ್ಷಿ.

ಆ ವಿಚಿತ್ರ ಪಕ್ಷಿಯನ್ನು ಪಂಜರದಿಂದ ಹೊರಗೆ ಬಿಡಲು ರಾಜಕುಮಾರಿಯ ಅನುಮತಿ ಕೇಳಿದರು. ನಿಜಕ್ಕೂ ಅದನ್ನು ಯಾರು ಹಿಡಿದು ತಂದರೋ ಆ ವ ನ ನ್ನು ಅವಳು ಮದುವೆಯಾಗಬೇಕಾಗಿತ್ತು. ಆದುದರಿಂದ ರಾಜಕುಮಾರಿ ಪಕ್ಷಿಯ ಅಪೇಕ್ಷೆಯಂತೆ, ಅದನ್ನು ಪಂಜರದಿಂದ ಹೊರಗೆ ಬಿಡಲು ಒಪ್ಪಿಕೊಂಡಳು.

ನೌಕರರು ಪಂಜರದ ಬಾಗಿಲು ತೆರೆದ ಕೂಡಲೇ ವಿಚಿತ್ರ ಪಕ್ಷಿ ಹಾರಿ ಹಾನೀಫನ ಹೆಗಲ ಮೇಲೆ ಬಂದು ಕುಳಿತುಕೊಂಡು, "ನನ್ನನ್ನು ಅರಣ್ಯದಲ್ಲಿ ಹಿಡಿದುಕೊಂಡವನು ನೀನೇ! ನೀನೇ!" ಎಂದು ಎರಡು ಸಾರಿ ಕೂಗಿ ಕೂಗಿ ಹೇಳಿತು.

ಪಕ್ಷಿ ಹಾಗೆ ಹೇಳಿದ ಕೂಡಲೇ ಹಾನೀಫನ ದುಷ್ಟ ಮಿತ್ರರಿಬ್ಬರೂ ಅಲ್ಲಿಂದ ಓಡಿಹೋಗಲು ನೋಡಿದರು. ಆಗ ರಾಜಭಟರು ಅವರನ್ನು ಓಡಿಸಿಕೊಂಡು ಹೋಗಿ ಹಿಡಿದು ದರದರ ಎಳೆದು ತಂದರು. ರಾಜನು ಅವರನ್ನು ಕಡುಗೋಪದಿಂದ ನೋಡಿ, "ಈ ದುಷ್ಟರ ತಲೆಗಳನ್ನು ಕಡಿದುಬಿಡಿ!" ಎಂದು ಭಟರಿಗೆ ಆಜ್ಞೆ ಮಾಡಿದನು.

ಹಾನೀಫ್ ರಾಜನೊಂದಿಗೆ, "ಪ್ರಭೂ ಇವರನ್ನು ಕ್ಷಮಿಸಿಬಿಟ್ಟು ಬಿಡಿರಿ! ಅರಣ್ಯದಲ್ಲಿ ಬಂಡೆಗಲ್ಲಾಗಿ ಬಿದ್ದಿದ್ದ ಇವರಿಗೆ ನಾನು ಪ್ರಾಣದಾನ ಮಾಡಿಸಿದೆ. ಅವರ ದುರ್ಮರಣವನ್ನು ಸಹಿಸಲು ನನ್ನಿಂದಾಗದು. ಪ್ರಭುಗಳು ದಯೆ ತೋರಿಸಬೇಕು" ಎಂದು ಪ್ರಾರ್ಥಿಸಿದನು.

ಹಾನೀಫನ ಇಷ್ಟವನ್ನು ಮನ್ನಿಸಿ ರಾಜನು ಅವರಿಬ್ಬರನ್ನೂ ಬಿಟ್ಟು ಬಿಡುವಂತೆ ಭಟರಿಗೆ ಆಜ್ಞೆ ಮಾಡಿದನು. ವಿಚಿತ್ರಪಕ್ಷಿ ಹಾನೀಫನ ಹೆಗಲ ಮೇಲೆ ರೆಕ್ಕೆಯಾಡಿಸಿ ಮೇಲೆದ್ದು, ಅರಣ್ಯದ ಕಡೆಗೆ ಹಾರಿಹೋಯಿತು.

ರಾಜಕುಮಾರಿಯೊಂದಿಗೆ ಹಾನೀಫನ ವಿವಾಹವು ಬಹಳ ವೈಭವದಿಂದ ನಡೆಯಿತು. ಆಮೇಲೆ ಅವನು ರಾಜಕುಮಾರಿಯೊಂದಿಗೆ ವರ್ಷಕ್ಕೊಮ್ಮೆ ವಿಚಿತ್ರ ಪಕ್ಷಿಯನ್ನು ನೋಡಲು ಅರಣ್ಯಕ್ಕೆ ಹೋಗುತ್ತಿದ್ದನು. ಆ ಪಕ್ಷಿ ಸುಶ್ರಾವ್ಯವಾಗಿ ಹಾಡುವಾಗ, ಅದರೊಂದಿಗೆ ತಮ್ಮ ಸ್ವರ ಬೆರೆಸದೆ, ಆನಂದವನ್ನು ಹದ್ದಿನಲ್ಲಿಟ್ಟು ಕೊಳ್ಳುತ್ತಿದ್ದರು ಆ ದಂಪತಿಗಳು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೪ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.





M. Natarajan — Suraj N. Sharma

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಜೂನ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಏಪ್ರಿಲ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ನಮ್ಮ ಸ್ವೇಚ್ಛಾಪಹಾರ ಮಾಡಿದವರು

ಎರಡನೇ ಫೋಟೋ : ಇಂಥಾ ಸ್ವೇಚ್ಛಾಚಾರದ ಮನಸ್ಕರೇ

ಕಳುಹಿಸಿದವರು : ಕೆ. ಸಿ. ಕೇಶವಮೂರ್ತಿ, ಕುಚ್ಚಪ್ಪನ ಪೇಟೆ, ದೊಡ್ಡಬಳ್ಳಾಪುರ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಕಾಳಿದಾಸ. ೨. ಹೋಮರ್. ೩. ಜಾನ್ ಮಿಲ್ಟನ್. ೪. ಕೌಟಿಲ್ಯ. ೫. ಸರ್ ವಿನ್‌ಸ್ಟನ್ ಚರ್ಚಿಲ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ೧೩

[ಪಿಂಗಳನ ಅಣ್ಣಂದಿರು ಮನೆಯಲ್ಲಿದ್ದ ಹಣವನ್ನು ಹಂಚಿಕೊಂಡು ಮಹತ್ವವಿರುವ ಚೀಲವು ನನಗೆ ತನಗೆಂದು ಹೊಡೆದಾಡಿಕೊಳ್ಳತೊಡಗಿದರು. ಅವರಿಬ್ಬರನ್ನೂ ರಾಜನು ಸೆರೆಮನೆಗೆ ತಳ್ಳಿಸಿದನು. ಈ ಸಂದರ್ಭದಲ್ಲಿ ಪಿಂಗಳನು ಸಿಕ್ಕಿಕೊಂಡಿರುವ ಹಡಗಿಗೂ ಇನ್ನೊಂದು ಹಡಗಿಗೂ ಯುದ್ಧ ಪ್ರಾರಂಭವಾಯಿತು. ಸರಂಗನು ಗುಲಾಮರನ್ನೆಲ್ಲಾ ಯುದ್ಧಕ್ಕೆ ಬಿಡುಗಡೆ ಮಾಡಿ ಸಿದ್ಧರಾಗುವಂತೆ ಹೇಳಿ ಆಯುಧಗಳನ್ನು ಕೊಟ್ಟನು.]

**ಬಾ**ಣಗಳೂ ಬೆಂಕಿಯ ಉಂಡೆಗಳೂ ಹಡಗಿಗೆ ಬೀಳುತ್ತಿರಲು, ಸರಂಗನು ಅವಸರವಸರವಾಗಿ ಆಜ್ಞೆಗಳನ್ನು ಕೂಗುತ್ತ, ಎಲ್ಲಾ ಗುಲಾಮರಿಗೂ ಆಯುಧ ಕೊಡಿಸಿದನು. ಎಲ್ಲಾ ಗುಲಾಮರ ಕೈಯಲ್ಲಿಯೂ ಕತ್ತಿಯೂ ಬಿಲ್ಲು ಬಾಣಗಳೂ ಇದ್ದುವು. ಈಗ ಸರಂಗನಿಗೆ ಆ ಗುಲಾಮರೇ ದಿಕ್ಕಾಗಿ ಕಾಣುವುದರಿಂದ, ಅವರ ಮೇಲೆ ಎಂದೂ ತೋರಿಸದ ಪ್ರೀತಿಯನ್ನೂ ಆಪ್ಯಾಯತೆಯನ್ನೂ ತೋರಿಸುತ್ತ, "ಈ ಕ್ಷಣದಿಂದ ನೀವಾರೂ ಗುಲಾಮರಲ್ಲ, ವೀರಯೋಧರು ! ನಮ್ಮ ಹಡಗು ಬಹು ದೊಡ್ಡ ಅಪಾಯಕ್ಕೆ ಸಿಕ್ಕಿದೆ. ನಮ್ಮ ಹಡಗನ್ನು ವಶಪಡಿಸಲು ನೋಡುವ ಆ ಶತ್ರುವಿಗೆ ನಾವು ಸಿಕ್ಕಿಕೊಂಡರೆ ಆಮೇಲೆ ಬದುಕಿರುವಷ್ಟು ಕಾಲ ನಾವು ಅವರ ಗುಲಾಮರಾಗಿರಬೇಕು. ನಾವು ಜಯಿಸಿಬಿಟ್ಟರೆ ಎಲ್ಲರೂ ಸ್ವೇಚ್ಛೆಯಾಗಿ ಜೀವಿಸಬಹುದು. ಆದ್ದರಿಂದ ನಮ್ಮೆಲ್ಲರ ಪ್ರಾಣರಕ್ಷಣೆಗೂ, ಸ್ವಾತಂತ್ರ್ಯಕ್ಕೂ ಜೀವದ ಹಂಗು ತೊರೆದು ಹೋರಾಡಬೇಕು. ನಮಗೆ ಜಯವಾಗಿಬಿಟ್ಟರೆ ನಿಮಗೆಲ್ಲರಿಗೂ ತಲಾ ನೂರು ವರಹ ಬಹುಮಾನ ಕೊಡುತ್ತೇನೆ. ಹೂಂ, ಬಾಣ ಹೊಡೆಯಿರಿ ಆ ಹಡಗಿನ ಮೇಲೆ!" ಎಂದನು.



ಸರಂಗನ ಮಾತಿನಲ್ಲಿ ಗುಲಾಮರಾರಿಗೂ ನಂಬುಗೆಯಾಗಲಿಲ್ಲ. ಅವನು ತಮ್ಮನೆಲ್ಲ ಎಷ್ಟು ಕ್ರೂರವಾಗಿ ಹಿಂಸಿಸಿದ್ದಾನೆಂಬುದನ್ನು ಅವರಲ್ಲಿ ಪ್ರತಿಯೊಬ್ಬನೂ ನೆನೆದುಕೊಂಡೇ ಇದ್ದನು. ಆದರೂ ಈ ಉಭಯ ಸಂಕಟದ ತರುಣದಲ್ಲಿ ತಾವೇನು ಮಾಡಬೇಕು ? ಶತ್ರುಗಳ ಹಡಗಿನಿಂದ ಬಾಣಗಳು ಹಾರಿ ಬರುತ್ತಲೇ ಇದ್ದುವು. ಅಗ್ನಿಗೋಳಗಳು ಬೀಳುತ್ತಲೇ ಇದ್ದುವು. ಸರಂಗನ ಕಡೆಯವರಿಗೆ ಹಡಗಿಗೆ ಬೆಂಕಿ ಹಿಡಿಯದಂತೆ ಆರಿಸುವುದೇ ಕೆಲಸವಾಗಿತ್ತು. ಹಡಗು ಬೆಂಕಿ ಹಿಡಿದು ಭಗ್ನವಾಗಿ ಮುಳುಗಿ ಹೋದರೆ ಅದರೊಂದಿಗೆ ತಮಗೂ ಸರ್ವನಾಶವೇ ಗತಿ, ಎಂದು ಎಲ್ಲರಿಗೂ ಗೊತ್ತಿತ್ತು. ಅದಕ್ಕಾಗಿಯಾದರೂ ಹೋರಾಡಲೇ ಬೇಕಾಗಿತ್ತು !

ಗುಲಾಮರ ಮನಸ್ಸಿನಲ್ಲಿ ಉಂಟಾದ ಈ ಅನುಮಾನಗಳೂ, ಸರಂಗನ ಮೇಲಿನ ರೋಷವೂ ಪಿಂಗಳನ ಮನಸ್ಸಿನಲ್ಲಿ ಕೂಡಾ ಕೆರಳಿ ಉರಿಯತೊಡಗಿತ್ತು.

ಸರಂಗನ ಆಜ್ಞೆಗಳು ಅವನ ಕಿವಿಗೂ ಬಿದ್ದಿದ್ದುವು. ಅವನು ಬಹು ಬೇಗನೆ ಒಂದು ನಿರ್ಣಯಕ್ಕೆ ಬಂದನು. ತಾವಿರುವ ಹಡಗು ನೀರಿನಲ್ಲಿ ಮುಳುಗಿ ಹೋಗದಂತೆ ನೋಡಬೇಕಾದುದು ಮೊದಲನೇ ಕೆಲಸವೇನೋ ನಿಜವೇ. ಆದರೆ ಅತಿ ಕ್ರೂರನಾದ ಸರಂಗನು ಮಾತ್ರ ಜೀವದಿಂದಿರಬಾರದು. ಆದ್ದರಿಂದ ಮೊದಲನೇ ಕೆಲಸ ಅವನನ್ನು ಕೊನೆಗೊಳಿಸುವುದೇ. ತರುವಾಯ ಸಂದರ್ಭಕ್ಕೆ ತಕ್ಕ ಹಾಗೆ ಶತ್ರುವಿನೊಂದಿಗೆ ರಾಜೀ ಮಾಡಿಕೊಂಡು ತಮ್ಮ ದಾರಿ ಹಿಡಿದು ಹೋಗಲಾಗುವುದೋ ನೋಡಬೇಕು. ತಪ್ಪಿದರೆ ಯುದ್ಧವಿದ್ದೇ ಇದೆ.

ಪಿಂಗಳನು ಹೀಗೆ ನಿರ್ಧರಿಸಿ ತನ್ನ ಜತೆಗಾರರೊಂದಿಗೆ ತನ್ನ ಆಲೋಚನೆಯನ್ನು ಬೇಗಬೇಗನೇ ತಿಳಿಸಿದನು. ಈ ಸರಂಗನು ಸಾಯುವವರೆಗೆ ಶತ್ರುಗಳನ್ನು ಮರೆತು ಮೊದಲು ಸರಂಗನನ್ನು ಕೊಲ್ಲಲು ಎಲ್ಲರನ್ನೂ ಪ್ರೋತ್ಸಾಹಿಸಿದನು. ಎಲ್ಲಾ ಗುಲಾಮರೂ ಇದಕ್ಕೆ ಒಪ್ಪಿದರು. ಯುವಕನೂ, ಬುದ್ಧಿಶಾಲಿಯೂ, ಧೈರ್ಯ ಸಾಹಸಗಳುಳ್ಳವನೂ ಆದ ಪಿಂಗಳನು ಕ್ಷಣ ಮಾತ್ರದಲ್ಲಿ ಅಲ್ಲಿಯ ಗುಲಾಮರಿಗೆ ನಾಯಕನಾದನು. ಒಬ್ಬರಿಂದ ಒಬ್ಬರಿಗೆ ಈ ಸುದ್ದಿ ಬಲು ಬೇಗನೆ ಹರಡಿ, ಎಲ್ಲರಿಗೂ ಹೊಸ ಹುರುಪು ಬಂತು.

ಕೂಡಲೇ ಪಿಂಗಳನು ಸಮುದ್ರವು ಮಾರ್ಮೊಳಗುವ ಹಾಗೆ ಒಂದು ಗರ್ಜನೆ ಹಾಕಿ, "ಎ ನರಮಾರಿ ಸರಂಗಾ ! ಯಾರು ನಂಬುತ್ತಾರೆ ನಿನ್ನ ಮಾತು ? ಇಂದಿಗೆ ಮುಗಿಯಿತು ನಿನ್ನ ಕಥೇ ! ಕೊಲ್ಲಿರಿ ಅವನನ್ನು ! ಕಡಿದು ಬೀಸಿರಿ ಸಮುದ್ರಕ್ಕೇ!" ಎಂದು ಕೂಗುತ್ತಾ ಮುಂದಕ್ಕೆ ಹಾರಿದನು. ಜತೆಗಾರರೂ ಅವನನ್ನು ಅನುಸರಿಸಿದರು.

ಹೀಗೆ ಒಮ್ಮೆಗೇ ಗುಲಾಮರೆಲ್ಲರೂ ಸಿಂಹಗಳ ಹಾಗೆ ತಮ್ಮನ್ನು ಚಿತ್ರಹಿಂಸೆಗೆ ಗುರಿ ಮಾಡಿದ ಸರಂಗನ ಮೇಲೂ, ಅವನ ಅನುಚರರ ಮೇಲೂ



ಕತ್ತಿಗಳನ್ನು ಬೀಸಿ ಹಾರಿಸಿಕೊಂಡು ಮುಗಿ ಬೀಳುವುದನ್ನು ನೋಡಿ, ಪರಿಸ್ಥಿತಿ ಹೀಗೆ ಬಿಗಡಾಯಿಸುವುದೆಂದು ಊಹಿಸಿರದಿದ್ದ ಸರಂಗನು ಕತ್ತರಿಯ ನಡುವೆ ಸಿಕ್ಕಿಕೊಂಡಂತಾದನು. ತನ್ನಿದಿರು ನಡೆಯುವುದನ್ನು ನಂಬುವುದೇ ಕಷ್ಟವೆನಿಸಿ ಏನೂ ತೋರದಾಯಿತು ಅವನಿಗೆ.

ಒಂದು ಕಡೆಯಿಂದ ಶತ್ರುಗಳಿಂದ ಅಗ್ನಿ ಬಾಣ ಹಾರಿ ಹಾರಿ ಬರುತ್ತಾ ಇದೆ. ಇಲ್ಲಿ ಹೀಗೆ ತನ್ನ ಹಡಗಿನ ಗುಲಾಮರ ತಂಡ ತನ್ನ ಮೇಲೆ ಕತ್ತಿ ಬೀಸುತ್ತಿದ್ದಾರೆ !

ಆಲೋಚಿಸಲಿಕ್ಕೂ ವ್ಯವಧಿ ಇಲ್ಲದಂತೆ ಘಟನೆಗಳು ಮುಂದೆ ಬರುತ್ತಿದ್ದುವು. ತನ್ನ ಪಕ್ಷದವರಿಗಿಂತಲೂ ಗುಲಾಮರ ಸಂಖ್ಯೆ ಹೆಚ್ಚಾಗಿದ್ದಿತು. ತಪ್ಪಿಸಿಕೊಳ್ಳುವುದು ಹೇಗೆ ?

ತನ್ನ ಅನುಚರರು ಕೆರಳಿದ ಗುಲಾಮರ ಕತ್ತಿಗೆ ಆಹುತಿಯಾಗುವುದನ್ನು ನೋಡಿ ಸರಂಗನು ಹುಚ್ಚನಂತಾದನು. ಅವನು ತನ್ನ ಅನುಚರರಿಗೆ ಆಜ್ಞೆಗಳನ್ನು ಮಾಡುವುದರೊಳಗೇ ಗುಲಾಮರ ಕತ್ತಿಗಳು ಅವರನ್ನು ತುಂಡು ತುಂಡು ಮಾಡಲು ತೊಡಗಿಯಾಗಿತ್ತು. ಸರಂಗನು ಹಿಂದೆ ಹಿಂದೆ ಹಾರಿ ತಪ್ಪಿಸಿಕೊಳ್ಳುತ್ತ, "ದ್ರೋಹಿಗಳು ! ಮೋಸ ! ಮೊದಲು ಈ ಗುಲಾಮರನ್ನೆಲ್ಲಾ ಕಡಿಯಿರಿ ! ಒಬ್ಬನನ್ನೂ ಬಿಡಬೇಡಿ !" ಎಂದು ಕರ್ಕಶವಾಗಿ ಅರಚುತ್ತ ಕತ್ತಿ ಹಿರಿದು ಅವರ ಮೇಲೆ ಬಿದ್ದನು. ಬಲಿಷ್ಠನಾದ ಆ ಸರಂಗನ ಕೈಚಳಕದ ಕತ್ತಿ ಏಟಿಗೆ ಐದಾರು ಮಂದಿ ಗುಲಾಮರು ಆಹುತಿಯಾದರು. ಅವನೊಬ್ಬ ಯಮದೂತನಂತೆ ಅವರಿಗೆ ಕಂಡನು. ಅವನನ್ನು ನೋಡಿ ಕೆಲವು ಗುಲಾಮರು ಹೆದರಿ ತಪ್ಪಿಸಿ ಓಡಲಿಕ್ಕೂ ತೊಡಗಿದರು. ಹಡಗಿನೊಳಗೆ ಎಲ್ಲಿಗೆಂದು ಓಡುವುದು ? ಕೆಲವರು ಅಲ್ಲಲ್ಲಿ ಅಡಗಿ ಕುಳಿತರು. ಪಿಂಗಳನು ಅದನ್ನು ನೋಡಿ ಅಪಾಯವನ್ನು ಗುರುತಿಸಿ ಕತ್ತಿಯನ್ನು ಮೇಲೆತ್ತಿ, ಸರಂಗನ ಮೇಲೆ ಹಾರುತ್ತ, "ಹೆದರಬೇಡ್ರೋ ! ಇದೋ ಸರಂಗನನ್ನು ನಾನೊಬ್ಬನೇ ಕೊಲ್ಲುತ್ತೇನೆ ! ನೋಡ್ರೋ ! ನೀವು ಹೆದರಿ ತಪ್ಪಿಸಿಕೊಂಡು ಓಡಿದರೆ ಸಮುದ್ರಕ್ಕೇ ಬೀಳುವಿರಿ. ಹೇಗಿದ್ದರೂ ನಮಗೆ ಸಾವು ಕಟ್ಟಿಟ್ಟದ್ದೇ. ಜೀವದಾಸೆಬಿಟ್ಟೇ ಇವರನ್ನೆಲ್ಲ ಕೊಲ್ಲೋಣ ! ನಾವೇನೂ ಕೈಲಾಗದವರಲ್ಲವೆಂದು ತೋರಿಸೋಣ !" ಎಂದು ಅವರಿಗೆ ಧೈರ್ಯ ಬರುವಂತೆ ಕೂಗಿ ಎಚ್ಚರಿಕೆ ಕೊಟ್ಟನು.

ಅದರಿಂದ ಓಡಿ ಹೋಗುವ ಗುಲಾಮರಿಗೆ ಧೈರ್ಯವೂ ಹಟವೂ ಮತ್ತೆ ಬಂದುವು. ಅಷ್ಟರೊಳಗೆ ಪಿಂಗಳನು ಕೆರಳಿದ ಸಿಂಹದ ಹಾಗೆ ಗರ್ಜಿಸುತ್ತ ಸರಂಗನನ್ನು ಇದಿರಿಸಿದನು. ಪಿಂಗಳನ ಮೊದಲನೇ ಕತ್ತಿಯ ಬೀಸಿಕೆ ಸರಂಗನ ಎದೆಯನ್ನು ಗೀರಿಕೊಂಡು ಹೋಯಿತು, ಸರಂಗನು "ಹಾ ಭೈರವೀ !" ಎಂದು ಬೊಬ್ಬಿಟ್ಟನು. ಅವನು ಎದೆಯನ್ನು ಒತ್ತಿಕೊಂಡು

ಪಿಂಗಳನನ್ನು ಸುಡುವಂತೆ ನೋಡುತ್ತಾ ಕತ್ತಿ ಝಳಪಿಸುತ್ತಿದ್ದನು. ಅವನೂ ಜೀವದ ಹಂಗು ಬಿಟ್ಟವನಾದನು. ಇಬ್ಬರೂ ತಪ್ಪಿಸಿಕೊಳ್ಳುವುದರಿಂದ ಹೊಡೆತಗಳು ಎಲ್ಲೆಲ್ಲೋ ತಗಲುತ್ತಿದ್ದುವು.

ಸರಂಗನ ದೇಹಶಕ್ತಿಯನ್ನೂ, ಕತ್ತಿ ಯುದ್ಧದ ಜಾಣತನವನ್ನೂ ನೋಡಿ ಅವನನ್ನು ಕೊಲ್ಲುವುದು ಕಷ್ಟವೆಂದು ಪಿಂಗಳನಿಗೆ ಅನಿಸಿತು. ಅದನ್ನು ತೋರಗೊಡದೆ ಅವನು ಯುದ್ಧ ಮಾಡುವಾಗ, ಸರಂಗನು ತಪ್ಪಿಸಿಕೊಳ್ಳುವ ಭರದಲ್ಲಿ ಒಂದು ಹಗ್ಗವು ಕಾಲಿಗೆ ಸಿಕ್ಕಿಕೊಂಡುದರಿಂದ ಮುಗ್ಗರಿಸಿ ಬೋರಲು ಬಿದ್ದನು. ಈ ಅವಕಾಶವನ್ನು ಬಿಡದೆ ಪಿಂಗಳನು ಭೀಕರವಾಗಿ ಕೂಗಿ ಸರಂಗನ ಬೆನ್ನಿಗೆ ಕತ್ತಿಯನ್ನು ಚುಚ್ಚುವಷ್ಟರಲ್ಲಿ, ಈ ಅಪಾಯನ್ನು ಊಹಿಸಿದ್ದ ಸರಂಗನು ಪಕ್ಕಕ್ಕೆ ಹೊರಳಿಬಿಟ್ಟನು. ಪಿಂಗಳನ ಕತ್ತಿ ಹಡಗಿನ ಹಲಗೆಗೆ ಚುಚ್ಚಿ ಸೀಳಿತು.

ಅದೇ ಸಮಯದಲ್ಲಿ ಸರಂಗನು ಹಾರಿ ಎದ್ದು ನಿಂತೂ ಬಿಟ್ಟನು. ಸರಂಗನು ವಿಕಟಾಟ್ಟಹಾಸ ಮಾಡುತ್ತ ಎದ್ದು ಪಾದವನ್ನು ಅಪ್ಪಳಿಸುತ್ತ, "ಓಹೋ ! ನೀನೇ ಈ ಗುಲಾಮರಿಗೆಲ್ಲಾ ನಾಯಕನೋ ? ಈ ಕತ್ತಿಯಿಂದ ನಿನ್ನನ್ನು ಚೂರು ಚೂರು ಮಾಡಿ ಸಮುದ್ರದ ಮೀನುಗಳಿಗೆ ಔತಣ ಹಾಕುತ್ತೇನೆ. ಆಮೇಲೆ ನಿನ್ನ ಜತೆಗಾರರು !" ಎನ್ನುವಾಗ, ಪಿಂಗಳನು ಅವನ ಮುಂದಿರದೆ ಆಚೆಗೆ ಹಾರಿಕೊಂಡಿದ್ದನು.

ಅಲ್ಲಿ ಪಿಂಗಳನು ಏನು ಮಾಡುತ್ತಿರುವನೆಂಬುದನ್ನು ಸರಂಗನು ಗಮನಿಸಲಿಲ್ಲ. ತನ್ನ ಕತ್ತಿ ಕೈತಪ್ಪಿ ಹೋದ ಕೂಡಲೇ ಪಿಂಗಳನು ಮುಂದಿನ ಅಪಾಯವನ್ನು ತಿಳಿದು, ಬೇರೊಂದು ಕತ್ತಿಗಾಗಿ ಹುಡುಕುತ್ತಿದ್ದನು. ಆದರೆ ಎಲ್ಲಿಯೂ ಕತ್ತಿ ಸಿಗಲಿಲ್ಲ. ಇತರ ಗುಲಾಮರು ಸರಂಗನ ಕಡೆಯವರೊಂದಿಗೆ ಹೋರಾಡಿಕೊಂಡಿದ್ದುದರಿಂದ ಈ ಕಡೆಗೆ ಗಮನಿಸುವಂತಿರಲಿಲ್ಲ.

ಪಿಂಗಳನು ಮಿಂಚಿನ ವೇಗದಲ್ಲಿ ಪಕ್ಕದಲ್ಲಿ ಸಿಕ್ಕಿದ ಒಂದು ಹಗ್ಗವನ್ನು ತೆಗೆದುಕೊಂಡು, ಅದರ ಕೊನೆಗೆ ಉರುಳು ಹಾಕಿ, ಸರಂಗನ ಮುಂದೆ ಹಾರಿದನು.



ಮೈ ತಿಳಿಯದಂತಹ ಆವೇಶದಲ್ಲಿದ್ದ ಸರಂಗನು ಕತ್ತಿ ನೆಗಹಿ ಅವನ ಮೇಲೆ ಹಾರುವುದಕ್ಕೂ, ಪಿಂಗಳನು ಉರುಳಿನ ಹಗ್ಗವನ್ನು ಬೀಸಿ ಅವನ ಕೊರಳಿನ ಮೇಲೆ ಹಾರಿಸುವುದಕ್ಕೂ ತಾಳೆಬಿತ್ತು. ಸರಂಗನ ಕುತ್ತಿಗೆಗೆ, ಬಿದ್ದ ಹಗ್ಗವನ್ನು ಎಳೆಯುತ್ತಾ ಪಿಂಗಳನು "ಓಹೋಯ್ ಕ್ರೂರ ಸರಂಗ ಸಿಕ್ಕಿಬಿದ್ದ !" ಎಂದು ಕೂಗುತ್ತ, ಹಿಂದೆ ಓಡತೊಡಗಿದನು.

ಕುತ್ತಿಗೆಗೆ ಬಿದ್ದ ಉರುಳಿನೊಂದಿಗೆ ಎಳೆಯಲ್ಪಡುವ ಸರಂಗನು ದೊಡ್ಡದನಿಯಿಂದ ಗಾಂಡ್ರಿಸುತ್ತ, ದಢಾಲ್ಲನೆ ಮರಬಿದ್ದ ಹಾಗೆ ಬಿದ್ದನು, ಬಿದ್ದವನು ಕೊರಳು ಬಿಗಿಯುವ ಹಗ್ಗವನ್ನು ಕೈಯಲ್ಲಿದ್ದ ಕತ್ತಿಯಿಂದ ಕಡಿಯಲು ಹೆಣಗುತ್ತಿರಲು, ಅದನ್ನು ಗಮನಿಸಿದ ಪಿಂಗಳನು ಹಿಂದಿರುಗಿ ಬಂದು ತನ್ನ ಕಡೆಯವರನ್ನು ಕೂಗಿದನು.

ಕೂಡಲೇ ಇಬ್ಬರು ಗುಲಾಮರು ಓಡುತ್ತ ಬಂದು ಬಿದ್ದಿರುವ ಸರಂಗನನ್ನು ನೋಡಿ ಕೆಟ್ಟ ರೊಚ್ಚಿನಿಂದ ಅವನ ಮೇಲೆ ಬಿದ್ದು ಕತ್ತಿಗಳಿಂದ ಅವನ ಶರೀರವನ್ನೆಲ್ಲಾ ರಂಧ್ರಮಯ ಮಾಡಿದರು. ಅವನು ಸತ್ತರೂ ಅವರ ರೋಷ ತೀರಲಿಲ್ಲ.

ಹೀಗೆ ಸರಂಗನ ಅಂತ್ಯವಾಗುವವರೆಗೂ ಸುತ್ತಲೂ ಏನು ನಡೆಯುವುದೆಂದು ನೋಡುವ ಸ್ತಿಮಿತ ಪಿಂಗಳನಿಗೆ ಬಂದಿರಲಿಲ್ಲ. ಈಗ ಅವನು ಗುಲಾಮನೊಬ್ಬನ ಕತ್ತಿಯನ್ನು ತೆಗೆದುಕೊಂಡು ಹಡಗಿನಲ್ಲಿ ನಡೆಯುವ ಹೋರಾಟದ ಕಡೆಗೆ ಓಡಿದನು. ಅಲ್ಲಿ ಇನ್ನೂ ಬದುಕಿ ಉಳಿದಿದ್ದ ಸರಂಗನ ಬೆರಳೆಣಿಕೆಯಷ್ಟೇ ಇದ್ದ ಅನುಚರರು, ಗುಲಾಮರ ಕೈಯಲ್ಲಿ ಸಾಯುವುದೋ, ಗಾಯಗೊಂಡು ಸಿಕ್ಕಿಬೀಳುವುದೋ ನಡೆದು ಮುಗಿಯಿತು. ಗುಲಾಮರನ್ನು ಹೊಡೆಯುವವರಾರೂ ಇನ್ನು ಹಡಗಿನೊಳಗೆ ಇಲ್ಲದಂತಾಯಿತು.

ಇಷ್ಟರಲ್ಲಿ ಶತ್ರುಗಳ ಹಡಗಿನಲ್ಲಿರುವ ಸೈನಿಕರು ಕೋಲಾಹಲದಿಂದ ಕಿರಿಚುತ್ತ ಪಿಂಗಳನಿರುವ ಹಡಗನ್ನು ಸಮೀಪಿಸುತ್ತಿದ್ದರು. ಆಗಲೂ ಅವರು ಬಾಣಪ್ರಯೋಗ ಮಾಡುವುದನ್ನು ಮಾತ್ರ ಬಿಡಲಿಲ್ಲ.





ತಮ್ಮ ಇದಿರಾಳಿ ಹಡಗಿನಲ್ಲಿ ಏನೋ ಕಲಹ ಪ್ರಾರಂಭವಾದುದನ್ನು ಅವರು ತಿಳಿದಿರಬೇಕು. ಆದುದರಿಂದ ಈಗ ಅವರು ಅಗ್ನಿಗೋಳವನ್ನು ಪ್ರಯೋಗಿಸುತ್ತಿದ್ದಿಲ್ಲ. ಹಡಗನ್ನು ಸರಕುಗಳೊಂದಿಗೆ ವಶಪಡಿಸಿಕೊಳ್ಳುವುದೇ ಅವರ ಉದ್ದೇಶವಾಗಿರಬೇಕೆಂದು ಅದರಿಂದ ಸ್ಪಷ್ಟವಾಯಿತು.

ಈಗ ಪಿಂಗಳನಿಗೆ ದೊಡ್ಡ ಯೋಚನೆ ಹಿಡಿಯಿತು. ಆ ಶತ್ರು ಹಡಗಿನವರೊಂದಿಗೆ ಹೋರಾಡಿ ಜಯಿಸಲು ತನ್ನೊಂದಿಗೆ ಇರುವ ಸ್ವಲ್ಪ ಮಂದಿಯೊಂದಿಗೆ ಸಾಧ್ಯವಾಗುವುದಲ್ಲವೆಂದು ಅವನಿಗೆ ತೋರಿತು. ಸುಮ್ಮನಿದ್ದು ಅವರಿಗೆ ಬಾಗಿಹೋದರೆ ಅವರು ಮತ್ತೆ ತಮ್ಮನ್ನೆಲ್ಲ ಬಂಧಿಸಿ ತಮ್ಮಿಂದ ಗುಲಾಮ ವೃತ್ತಿ ಮಾಡಿಸಬಹುದು. ಮತ್ತೆ ತಮ್ಮ ಗತಿ ಮೊದಲಿನ ಹಾಗೇ ಆಗುತ್ತದೆ. ನಿಜಕ್ಕೂ ಆ ಹಡಗಿನಲ್ಲಿರುವವರು ಎಷ್ಟು ಮಂದಿಯೋ? ಎಂಥವರೋ? ಅವರ ನಿಜವಾದ ಬಲವು ಎಷ್ಟೋ?

ಪಿಂಗಳನು ಸರಂಗನಿಂದ ಎಳೆದುಕೊಂಡಿದ್ದ ದುರ್ಬೀನಿನಿಂದ ಶತ್ರುವಿನ ಹಡಗನ್ನು ನೋಡಿದನು. ಆ ಹಡಗಿನ ತುಂಬಾ ನಾವಿಕರಿದ್ದರು. ಅಂಥವರೊಂದಿಗೆ ಹೋರಾಡಿ ಪ್ರಯೋಜನವಿಲ್ಲವೆಂಬ ನಿಶ್ಚಯಕ್ಕೆ ಪಿಂಗಳನು ಬಂದನು. ಮೊದಲು ತನ್ನ ಹಡಗಿನಲ್ಲಿದ್ದ ಬಿಳಿಯ ಪತಾಕೆಯನ್ನು ಎತ್ತಿ, ತಮ್ಮ ಪರಿಸ್ಥಿತಿಯನ್ನು ಆ ಹಡಗಿನಲ್ಲಿದ್ದವರಿಗೆ ತಿಳಿಸಿ, ರಾಜಿಯ ದಾರಿಹಿಡಿದು ಜಾರಿಕೊಂಡು ಹೋಗುವುದೇ ಒಳ್ಳೆಯದೆಂದು ಅವನಿಗೆ ತೋರಿತು. ಅವರು ಅದಕ್ಕೆ ಒಪ್ಪುವುದೂ ಬಿಡುವುದೂ ಮುಂದಿನ ಮಾತು. ಆಮೇಲೆ ದೈವೇಚ್ಛೆ!

ತಮ್ಮ ಹಡಗಿಗೆ ಶತ್ರು ನಾವಿಕರು ಇನ್ನೂ ಸ್ವಲ್ಪ ದೂರದಲ್ಲೇ ಇದ್ದರು. ತಡಮಾಡಿದಷ್ಟೂ ಸಮೀಪಿಸಿಬಿಡುವರು. ಅಷ್ಟರೊಳಗೆ ಏನೋ ಒಂದು ಆಗಲೇ ಬೇಕಿತ್ತು. ಪಿಂಗಳನ ಆಜ್ಞೆಯಂತೆ ಗುಲಾಮರು ಹಡಗಿನ ಕೂವೆ ಮರದ ತುದಿಗೆ ಬಿಳೀ ಪತಾಕೆ ಏರಿಸಿದರು. ಅದನ್ನು ನೋಡಿದ ಕೂಡಲೇ ಶತ್ರುವಿನ ಹಡಗಿನಿಂದ ನಡುನಡುವೆ ಜಯಜಯ ಶಬ್ದಗಳು ಕೇಳತೊಡಗಿದುವು.

ಪಿಂಗಳನು ದೂರಶ್ರವಣದ ತುತ್ತೂರಿಯಂತಹ ಕಹಳೆಯನ್ನು ಬಾಯಿಗಿಟ್ಟು ಶತ್ರು ಹಡಗಿನವರೊಂದಿಗೆ ತಮ್ಮ ಹಡಗಿನಲ್ಲಿ ನಡೆದ ಸಂಗತಿಯನ್ನು ಹೇಳಿ, "ನಿಮ್ಮ ಹಡಗನ್ನು ಜಯಿಸಿ ವಶಪಡಿಸಿಕೊಳ್ಳುವ ಇಚ್ಛೆ ನಮಗಾರಿಗೂ ಇಲ್ಲ. ಕೇವಲ ಗುಲಾಮರಾದ ನಾವೆಲ್ಲರೂ ಕ್ರೂರನಾದ ನಮ್ಮ ಯಜಮಾನನನ್ನೂ, ಅವನ ಕಡೆಯವರನ್ನೂ ಹತ ಮಾಡಿದ್ದೇವೆ. ನಾವೀಗ ನಿಮ್ಮೊಡನೆ ಕೇಳುವುದೆಲ್ಲಾ, ನಮ್ಮ ಹಡಗನ್ನು ಯಾವುದೋ ಒಂದು ರೇವಿಗೆ ನಡೆಸಿ, ಅಲ್ಲಿಂದ ಯಾರು ಯಾವ ದೇಶದವರೋ ಅಲ್ಲಿಗೆ ಹೋಗುವಂತಾದರೆ ಸಾಕು. ಆದ್ದರಿಂದ ನೀವು ದೊಡ್ಡ ಮನಸ್ಸು ಮಾಡಿ, ರಾಜೀಯಾಗಿ,



ನಮ್ಮ ತಂಟೆಗೆ ಬಾರದೆ ನಮ್ಮ ಪಾಡಿಗೆ ಹೋಗಲು ಬಿಡಬೇಕು. ನೀವು ಕೂಡಾ ಸಮುದ್ರದಲ್ಲಿ ನಿಮ್ಮ ದಾರಿ ಹಿಡಿದು ಹೋಗಿಬಿಡಬೇಕೆಂದು ಪ್ರಾರ್ಥಿಸುತ್ತೇನೆ. ಇದು ನಮಗಿಬ್ಬರಿಗೂ ಒಳ್ಳೆಯದು" ಎಂದು ಕೂಗಿ ಹೇಳಿದನು.

ಅವನ ಮಾತು ಕೇಳಿದ ಮೇಲೆ ಶತ್ರು ಹಡಗಿನಲ್ಲಿ ಮತ್ತೆ ಕಲಕಲವೆದ್ದಿತು. ಸ್ವಲ್ಪಹೊತ್ತಿನ ಮೇಲೆ ಆ ಗದ್ದಲವು ಅಡಗಿತು. ಆಮೇಲೆ ಅಲ್ಲಿಂದ ಭೀಕರವಾದೊಂದು ಕಂಠಸ್ವರವು ಹೀಗೆ ಕೂಗಿ ಹೇಳಿತು :

"ಗುಲಾಮರಾದ ನಿಮಗೆ ಸ್ವೇಚ್ಛೆಯಾಗಿ ಸಮುದ್ರದ ಮೇಲೆ ಹಡಗು ನಡೆಸುವ ಹಕ್ಕು ಇಲ್ಲವೇ ಇಲ್ಲ. ಅದರ ಮೇಲೆ ನಿಮ್ಮ ಯಜಮಾನನನ್ನೂ, ಅವನ ಕಡೆಯವರನ್ನೂ ಕೊಂದುಹಾಕಿ ಕ್ಷಮಿಸಲಾಗದ ದೊಡ್ಡ ಅಪರಾಧ ಮಾಡಿದ್ದೀರಿ ! ಅದಕ್ಕೆ ತಕ್ಕ ಶಿಕ್ಷೆ ನಿಮಗೆ ಆಗಲೇಬೇಕು. ಇಲ್ಲದೆ ಹೋದರೆ ನಿಮ್ಮಿಂದ ಪಾಠ ಕಲಿತು ನನ್ನ ಹಡಗಿನ ಗುಲಾಮರು ಕೂಡಾ ಇನ್ನೊಂದು ದಿನ ದಂಗೆ ಎದ್ದು ನಮ್ಮನ್ನು ಹತಮಾಡಬಹುದು. ಒಳ್ಳೆಯ ಮಾತಿನಲ್ಲಿ ಹಡಗಿಗೆ ಲಂಗರಿಳಿಸಿ ಇರುವ ಸರಕುಗಳೊಂದಿಗೆ ಕಿಂಕಂ ಎನ್ನದೆ ನಮಗೆ ವಶರಾಗಿರಿ ! ಜಾಗ್ರತೆ !"

ಈ ಮಾತನ್ನು ಕೇಳಿ ಪಿಂಗಳನು ನಿರ್ವಿಣ್ಣನಾದನು. ಅದು ವರ್ತಕ ಹಡಗಿನ ಮುಸುಗಿನಲ್ಲಿರುವ ಸಮುದ್ರ ಚೋರರ ಹಡಗೆಂದು ಅವನು ಊಹಿಸಿಕೊಂಡನು, ಅಂತಹ ಕ್ರೂರರಿಗೆ ತಾನೂ ತನ್ನ ಅನುಚರರೂ ವಶಪಡುವುದೆಂದರೆ, ಮತ್ತೆ ತಾವೆಲ್ಲಾ ಗುಲಾಮರಾಗಿ ಮಾರಿಕೊಳ್ಳಲ್ಪಟ್ಟವರ ಹಾಗೆಯೇ ಸರಿ. ಅದು ಪಿಂಗಳನಿಗೆ ಮಾತ್ರವಲ್ಲ, ಅವನ ಸಹಚರರಿಗೂ ಇಷ್ಟವಿರಲಿಲ್ಲ.

ಪಿಂಗಳನು ಒಂದೆರಡು ಮಾತುಗಳಲ್ಲೇ ಪರಿಸ್ಥಿತಿಯನ್ನು ಕುರಿತು ಅನುಚರರಿಗೆ ಹೇಳಿದನು. ಅವರಲ್ಲಿ ಪ್ರತಿಯೊಬ್ಬನೂ ಹೋರಾಡಲಿಕ್ಕೇ ಸಿದ್ಧನಾಗಿರುವುದನ್ನು ಪ್ರಕಟಪಡಿಸಿದರು. ಪಿಂಗಳನ ಧೈರ್ಯ ಸಾಹಸ ದೃಢಚಿತ್ತಗಳು ಅವರೆಲ್ಲರಲ್ಲಿಯೂ ಪ್ರತಿಫಲಿಸಿಬಿಟ್ಟಿದ್ದುವು. ಒಬ್ಬ ಕ್ರೂರ ನರರಾಕ್ಷಸನ ಕೈಯಿಂದ ತಪ್ಪಿ ಮತ್ತೊಬ್ಬ ಕ್ರೂರ ರಾಕ್ಷಸನ ಕೈಗೆ ಬೀಳುವುದಕ್ಕಿಂತ ಹೋರಾಡಿ ಸಮುದ್ರಕ್ಕೆ ಬಿದ್ದು ಸಾಯುವುದೇ ಉತ್ತಮವೆಂದು ಎಲ್ಲರೂ ಒಕ್ಕೊರಳಿನಿಂದ ಹೇಳಿದರು.

ಕೂಡಲೇ ಬಿಳೀ ಪತಾಕೆಯನ್ನು ಕೆಳಗಿಳಿಸಲಾಯಿತು. ಮತ್ತೆ ಗುಲಾಮರೆಲ್ಲ ಪಿಂಗಳನ ಮುಂದಾಳ್ತನದಲ್ಲಿ ಜಯಜಯಾರಾವ ಮಾಡಿದರು. ಸಂಖ್ಯಾಬಲದಲ್ಲಿ ಅಧಿಕರಾಗಿದ್ದ ಶತ್ರು ಸೈನಿಕರು ಒಂದು ಸಾರಿ ತಮ್ಮ ಹಡಗಿಗೆ ಏರಿಬಿಟ್ಟರೆಂದರೆ ಆಮೇಲೆ ತಮ್ಮಿಂದ ಏನು ಮಾಡಲೂ ಸಾಧ್ಯವಾಗದು. ಆದುದರಿಂದ ಸಾಧ್ಯವಾದಷ್ಟು ಬೇಗದಲ್ಲಿ ಶತ್ರು ಹಡಗಿಗೆ ದೂರವಾಗಿ ಹೋಗಿ, ಬಾಣಗಳಿಂದ

ಯುದ್ಧ ಮಾಡುತ್ತ ಅವರು ಸಮೀಪ ಬಾರದಂತೆ ನೋಡಿಕೊಳ್ಳಬೇಕು. ಅಂಥಾ ಸಂದರ್ಭ ಬಂದು ಬಿಟ್ಟರೆ, ತನ್ನ ಹಡಗನ್ನು ಶತ್ರುವಿನ ಹಡಗಿಗೆ ಗುದ್ದಿಸಿ ಅವರನ್ನೂ ತಮ್ಮನ್ನೂ ಸರ್ವನಾಶಪಡಿಸಿಕೊಳ್ಳುವ ನಿರ್ಧಾರದವರೆಗೂ ಪಿಂಗಳನು ಬಂದಿದ್ದನು.

ಯುದ್ಧವು ಮತ್ತೆ ಪ್ರಾರಂಭವಾಯಿತು. ಪಿಂಗಳನ ಅನುಚರರು ಎಡೆಬಿಡದೆ ಶತ್ರುಗಳ ಹಡಗಿನ ಕಡೆಗೆ ಬಾಣಗಳನ್ನು ಹಾರಿಸುತ್ತಾ ಇದ್ದರು. ಪಿಂಗಳನೂ ಬಾಣ ಬಿಡುತ್ತಾ, ಹಡಗನ್ನು ಹಿಂದಕ್ಕೆ ಓಡಿಸುವಂತೆ ಹೇಳುತ್ತಿದ್ದನು. ಹೀಗೆ ಹೋರಾಡುತ್ತಾ ಸಾಧ್ಯವಾದಷ್ಟು ದೂರ ದೂರ ಹೋಗಿಬಿಡಬೇಕಾಗಿತ್ತು. ಅಷ್ಟೇ ವೇಗದಿಂದ ಶತ್ರು ಹಡಗೂ ಬರುತ್ತಿರುವುದನ್ನು ನೋಡಿದ ಮೇಲೆ ತಪ್ಪಿಸಿಕೊಳ್ಳುವ ಮಾತು ಅಸಾಧ್ಯವೆನಿಸತೊಡಗಿತು. ತಮಗಿಂತ ಎರಡು ಪಾಲು ಹೆಚ್ಚಿನ ವೇಗದಿಂದ ಶತ್ರುಗಳ ಹಡಗು ಓಡಿಸಿಕೊಂಡು ಬರುತ್ತಿದೆ ! ಇನ್ನು ದೇವರೇ ಗತಿ !

ಪಿಂಗಳನು ತಟಕ್ಕನೆ ಕೊನೆಯ ನಿರ್ಧಾರಕ್ಕೇ ಬಂದನು. ವಿಜಯವೋ ವೀರ ಮರಣವೋ ! ಅದಕ್ಕಿಂತ ಬೇರೆ ದಾರಿ ಯಾವುದೂ ಇಲ್ಲ. ತನ್ನ ಹಡಗನ್ನು ಅತಿ ವೇಗವಾಗಿ ತಿರುಗಿಸಿ ಓಡಿಸಿ, ಶತ್ರುವಿನ ಹಡಗಿಗೆ ಢೀ ಗುದ್ದಿರೆಂದು ತನ್ನ ಕಡೆಯವರಿಗೆ ಅರಚಿ ಹೇಳಿದನು ಪಿಂಗಳ !

ಕೂಡಲೇ ಎಲ್ಲಾ ಗುಲಾಮರೂ ಹಲ್ಲು ಕಚ್ಚಿ ಚಲಿಸಿ ಹಡಗನ್ನು ತಿರುಗಿಸಿ ಓಡಿಸತೊಡಗಿದರು. ಅದನ್ನು ನೋಡಿ ಶತ್ರುಗಳು ಮೊದಲು ಆಶ್ಚರ್ಯ ಪಟ್ಟರು. ಆಮೇಲೆ ಪಿಂಗಳನ ಉದ್ದೇಶವೇನೆಂಬುದು ಅವರಿಗೆ ಅರ್ಥವಾಯಿತು. ಹೆದರಿ ಕಂಗಾಲಾಗಿ ಕಂಪಿಸುತ್ತ ಹಾಹಾಕಾರ ಮಾಡತೊಡಗಿದರು.

ತಮ್ಮ ಹಡಗನ್ನು ಹಿಂದೆ ತಿರುಗಿಸಿ ಅಪಾಯದಿಂದ ಪಾರಾಗಬೇಕೆಂದು ಶತ್ರುಗಳು ಮಾಡಿದ ಪ್ರಯತ್ನಗಳು ಫಲಕಾರಿಯಾಗಲಿಲ್ಲ. ಪಿಂಗಳನು ಕತ್ತಿ ಝಳಪಿಸುತ್ತ ತನ್ನ ಅನುಚರರಿಗೆ ವೇಗವಾಗಿ ಓಡಿಸವಂತೆ ಕೂಗಿ ಕೂಗಿ ಹುರುಪುಗೊಳಿಸುವ ಆಜ್ಞೆ ಮಾಡುತ್ತಲೇ ಇದ್ದನು.

ನೋಡ ನೋಡುತ್ತಿದ್ದಂತೆ ಹಡಗು ಮಹಾ ವೇಗದಿಂದ ಮುಂದೆ ಮುಂದೆ ಹಾರಿ ಶತ್ರುವಿನ ಹಡಗನ್ನು ಗುದ್ದಿತು. ಮರುಕ್ಷಣದಲ್ಲಿ ಸಾವಿರಾರು ಕೊರಳುಗಳ ಆರ್ತನಾದವು ಸಮುದ್ರ ಜಲದ ಮೇಲೆ ತೇಲಾಡಿತು!

ಎರಡು ಹಡಗುಗಳೂ ಒಂದನ್ನೊಂದು ಢೀ ಹೊಡೆದುದರಿಂದ ಆಗ ಉಂಟಾದ ಹಾರಿಕೆಯ ಸ್ಪಂದನ ವೇಗಕ್ಕೆ ಪಿಂಗಳನು ತಾನಿದ್ದ ಸ್ಥಳದಿಂದ ಸಿಡಿದು ಆಕಾಶಕ್ಕೆ ಎಗರಿ ಯಾರೋ ಎತ್ತಿ ಬಿಸುಟ ಹಾಗೆ ಯಾವ ದಿಕ್ಕಿಗೋ ದೂರ ಹೋಗಿ ಸಮುದ್ರ ಜಲದಲ್ಲಿ ಬಿದ್ದನು. —( ಇನ್ನೂ ಇದೆ )

